# ನಿರಂಜನರ ಸಾಹಿತ್ಯ ಮತ್ತು ಸಮಕಾಲೀನತೆ

ವಿವಿಧ ಲೇಖಕರು



ಕರ್ನಾಟಕ ಸಾಹಿತ್ಯ ಅಕಾಡೆಮಿ

ನೃಪತುಂಗ ರಸ್ತೆ, ಬೆಂಗಳೂರು-೫೬೦ ೦೦೨

NIRANJANARA SĀHITYA MATTU SAMĀKALĪNATHE :
A collection of articles, by various writers by the Karnataka Sahitya Akademy, Nrupathunga Road, Bangalore-560 002.

First Publication : 1992 Pages : 64+VI

PRICE : 6/-

ಮೊದಲ ಮುದ್ರಣ : ೧೯೯೨

ಬೆಲೆ : **ಆರು ರೂಪಾಯಿಗಳು**

ಪ್ರಧಾನ ಸಂಪಾದಕರು

**ಬರಗೂರು ರಾಮಚಂದ್ರಪ್ಪ**

ಅಧ್ಯಕ್ಷರು, ಕರ್ನಾಟಕ ಸಾಹಿತ್ಯ ಅಕಾಡೆಮಿ

ಪ್ರಕಾಶಕರು :

**ಬಿ. ಎಸ್. ಸತ್ಯನಾರಾಯಣರಾವ್**

ರಿಜಿಸ್ಟ್ರಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ

ಮುದ್ರಕರು :

**ಉಮಾ ಪ್ರಿಂಟ್‌ಆರ್ಟ್ಸ್**

ನಂ. ೬೭, ಮೂರನೇ ಅಡ್ಡರಸ್ತೆ, ಕೌಸರ್‌ನಗರ
ಆರ್. ಟಿ. ನಗರ, ಬೆಂಗಳೂರು-೩೨.

## ಲೇಖನಗಳು

೧. ಸಾಹಿತ್ಯದಲ್ಲಿ ಪ್ರಗತಿಶೀಲತೆ ಮತ್ತು ನಿರಂಜನರ ತಾತ್ವಿಕ ನೆಲೆ .... ೧
— ಗುಡಿಹಳ್ಳಿ ನಾಗರಾಜ

೨. ನಿರಂಜನರ ಕಾದಂಬರಿಗಳಲ್ಲಿ ಬಿಡುಗಡೆಯ ಹೋರಾಟಗಳ ಅಭಿವ್ಯಕ್ತಿ .... ೧೬
— ಸಿದ್ದನಗೌಡ ಪಾಟೀಲ

೩. ನಿರಂಜನರ ಕಾದಂಬರಿಗಳಲ್ಲಿ ಮಧ್ಯಮ ವರ್ಗದ ಸ್ವರೂಪ ಚಿತ್ರಣ .... ೨೯
— ಹೊರೆಯಾಲ ದೊರೆಸ್ವಾಮಿ

೪. ನಿರಂಜನರ ಚಾರಿತ್ರಿಕ ಕಾದಂಬರಿಗಳಲ್ಲಿ ಸಮಕಾಲೀನ ಆಶಯುಗಳು .... ೪೦
— ಚಿ. ಶ್ರೀನಿವಾಸರಾಜು

೫. ನಿರಂಜನರ ಕತೆಗಳಲ್ಲಿ ವಸ್ತು ಮತ್ತು ತಂತ್ರ .... ೫೩
— ಆರ್. ಜಿ. ಹಳ್ಳಿ ನಾಗರಾಜ

# ಅಧ್ಯಕ್ಷರ ಮಾತು

ದಿ॥ ನಿರಂಜನರ ಸೃಜನಶೀಲ ಶಕ್ತಿಯಂತೆಯೇ ಇಚ್ಛಾ ಶಕ್ತಿಯೂ ಅಸಾಧಾರಣ. ಪ್ರಗತಿಶೀಲತೆಯನ್ನು ಒಂದು ಪ್ರಕಿಯೆಯೆಂದು ಪರಿಭಾವಿಸಿದ ನಿರಂಜನರು ನನ್ನಂಥ ಅನೇಕರೊಳಗೆ ಇನ್ನೂ ನಡೆದಾಡುತ್ತಲೇ ಇದ್ದಾರೆ. ಈ ನಡೆದಾಟವೇ ಒಡನಾಟವಾಗಿ ಒಳಗಿನ ಹೋರಾಟವಾಗಿ ರೂಪುಗೊಳ್ಳುವ ರೀತಿ ನಿರಂಜನರಿಗೆ ಒಂದು ಪ್ರತಿಮೆಯಾಗಬಲ್ಲದು. ಪ್ರಗತಿಶೀಲ ಚಳುವಳಿಯ ಕೊರತೆಗಳನ್ನು ಪಟ್ಟಿ ಮಾಡುತ್ತ ನಾಗಾಲೋಟದಲ್ಲಿ ಓಡುವ ವಿಮರ್ಶೆ, ಒಂದು ಕ್ಷಣವಾದರೂ ನಿರಂಜನರನ್ನು ನೇರ ನಿಟ್ಟಿಸಿ, ಕುತೂಹಲದಿಂದ ಪುಟ ತಿರುವುತ್ತ ಪ್ರಶ್ನಾರ್ಥಕವಾಗುತ್ತದೆ, ಆಶ್ಚರ್ಯ ಸೂಚಕವಾಗುತ್ತದೆ. ನಾಗಾಲೋಟದ ಬುಸುಗುಡುವಿಕೆ ನಸುನಗೆಯಾಗುತ್ತಾ ಮೆಲ್ಲನೆ ಮಾತಾಡತೊಡಗುತ್ತದೆ. ಆಗ ಗೊತ್ತಾಗುತ್ತದೆ-ಈ ಪುಟಗಳು ಬರೀ ಪುಟಗಳಲ್ಲ; ಇಲ್ಲಿ ಅಚ್ಚಿನ ಯಂತ್ರದ ಮೆಚ್ಚಿನ ಮೊಳೆಗಳು ಮಾತ್ರ ಇಲ್ಲ; ಇಲ್ಲಿ ನಾನಿದ್ದೇನೆ; ನನ್ನ ಅಕ್ಕ ಪಕ್ಕದವರಿದ್ದಾರೆ; ನಾನು–ನನ್ನವರು ನಾಡಿನ ಗೂಡಾಗುತ್ತೇವೆ. ಚಿಲಿಪಿಲಿ ಎನ್ನುತ್ತಲೇ ಹಾವು–ಹದ್ದುಗಳನ್ನು ಕಾಣುತ್ತೇವೆ. ಕಾಡು–ಕತ್ತಲೆಗಳನ್ನು

ದಾಟುತ್ತ ಬೆಳಕನ್ನು ಮೀಟುತ್ತೇವೆ. – ಹೀಗೆ ಏನೆಲ್ಲ ಅನ್ನಿಸಬಹುದು: ಆಗಬಹುದು. ಇದೇ ನಿರಂಜನರ 'ಯಶಸ್ವೀ ರಚನೆಗಳ' ವಿಶಿಷ್ಟತೆ.

ನಿರಂಜನರ ಕ್ರಿಯಾಶೀಲತೆಯೆಂದರೆ ಕೇಂದ್ರ ಶಕ್ತಿಯೊಂದನ್ನು ದಕ್ಕಿಸಿಕೊಂಡ ಬಹುರೂಪಿಯೆಂದೇ ಹೇಳಬಹುದು. ಕತೆ, ಕಾದಂಬರಿ, ಅಂಕಣ ಬರಹ, ಸಂಕಲನಗಳ ಸಂಪಾದನೆ, ಕಿರಿಯರ ವಿಶ್ವಕೋಶ–ಹೀಗೆ ವಿವಿಧ ನೆಲೆಗಳನ್ನು ಹಾದು ಕೇಂದ್ರ ಪ್ರತಿಭೆಗೆ ಪೂರಕ ಶಕ್ತಿ ಪಡೆಯುತ್ತಲೇ ಇದ್ದ ಇವರು ಕಡೇ ಗಳಿಗೆಯುವರೆಗೆ ಮನಷ್ಯನ ಸಂಕಲ್ಪ ಶಕ್ತಿಯನ್ನು 'ಸಾಕ್ಷಿ'ಯಂತೆ ಕಾಣುತ್ತಿದ್ದರು. ಅಪರೂಪದ ಅಧ್ಯಯನಶೀಲತೆ ಮತ್ತು ರಾಜಕೀಯ ಪ್ರಜ್ಞೆಯಿಂದ ಪುಷ್ಟಿಗೊಂಡ ಸಾಂಸ್ಕೃತಿಕ ಚೈತನ್ಯಶೀಲತೆಗಳಿಂದ ಜನಾನುರಾಗಿ ಲೇಖಕರಲ್ಲಿ ಎದ್ದು ಕಾಣುವ ವ್ಯಕ್ತಿತ್ವವನ್ನು ಪಡೆದಿದ್ದ ನಿರಂಜನರು ಕೆಲವು ಸಾರ್ಥಕ ಕೃತಿಗಳಿಂದ ಈಗಲೂ ನಮ್ಮ ಕಣ್ಮುಂದೆ ಸುಳಿದಾಡುತ್ತಾರೆ; ಸಂಳಿಯಾಗುತ್ತಾರೆ. ಸಮಕಾಲಿನವಾಗುತ್ತಾರೆ. ಹೀಗಾಗಿ ಸಮಕಾಲೀನತೆಯನ್ನು ಅರ್ಥೈಸಿಕೊಳ್ಳುತ್ತಲೇ ನಿರಂಜನರ ಕೃತಿಗಳನ್ನು ಪ್ರವೇಶಿಸಿ, ಪರಿಶೀಲಿಸುವ ಒಂದು ವಿಧಾನ ಉಪಯುಕ್ತವಾದೀತೆಂದು ಭಾವಿಸಿ "ನಿರಂಜನರ ಸಾಹಿತ್ಯ ಮತ್ತು ಸಮಕಾಲೀನತೆ' ಎಂಬ ವಿಚಾರ ಸಂಕಿರಣವನ್ನು ಏರ್ಪಡಿಸಲಾಗಿತ್ತು.

ಈ ವಿಚಾರ ಸಂಕಿರಣವು ದಾವಣಗೆರೆಯಲ್ಲಿ ದಿನಾಂಕ ೧೭-೫-೧೯೯೨ ರಂದು ನಡೆಯಿತು. ಅಲ್ಲಿ ಮಂಡಿತವಾದ ಪ್ರಬಂಧಗಳು ಈ ಪುಸ್ತಕ ರೂಪದಲ್ಲಿ ಹೊರಬರುತ್ತಿವೆ. ನಮ್ಮ ಅಕಾಡೆಮಿಯು ನಡೆಸುವ ಎಲ್ಲ ವಿಚಾರ ಸಂಕಿರಣಗಳ ಪ್ರಬಂಧಗಳನ್ನು ಸಂಕಲಿಸಿ ಇದೇ ರೀತಿ ಪ್ರತ್ಯೇಕ ಪುಸ್ತಕ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಲೇಖನಗಳ ಸಂಖ್ಯೆ, ಪುಟ ಸಂಖ್ಯೆ ಮುಂತಾದ ಅಂಶಗಳಿಗಿಂತ ಮುಖ್ಯವಾಗಿ ಈ ಪುಸ್ತಕಗಳು ಒಂದೆರಡಾದರೂ ಹೊಸ ಪ್ರಶ್ನೆಗಳಿಗೆ, ಹೊಸ ಒಳನೋಟಗಳಿಗೆ ಪ್ರೇರಣೆಯಾದರೆ ಅದೇ ಸಂತೋಷದ ಸಂಗತಿ. ಯಾಕೆಂದರೆ ಚರ್ಚೆಯು ಕ್ರೋಡೀಕರಣ ಮತ್ತು ಮುಂದುವರಿಕೆ ಸಾಂಸ್ಕೃತಿಕವಾಗಿ ಒಂದು ಮುಖ್ಯ ಪ್ರಕ್ರಿಯೆಯಾಗುತ್ತದೆ.

ವಿಚಾರ ಸಂಕಿರಣದಲ್ಲಿ ಭಾಗವಹಿಸಿ ಲೇಖನಗಳನ್ನು ಬರೆದು ಕೊಟ್ಟ ಪ್ರಬಂಧಕಾರರಿಗೆ, ಅಚ್ಚು ಮಾಡಿಕೊಟ್ಟ ಉಮಾ ಪ್ರಿಂಟ್‌ಆರ್ಟ್ಸ್‌ ಅವರಿಗೆ, ಸದಾ ಚೈತನ್ಯ ತುಂಬುವ ಅಕಾಡೆಮಿಯ ಸದಸ್ಯರಿಗೆ, ಸಿಬ್ಬಂದಿ ವರ್ಗದವರಿಗೆ ಹಿತೈಷಿಗಳಿಗೆ ನನ್ನ ನೆನಕೆಗಳು ಸಲ್ಲುತ್ತವೆ.

ಬೆಂಗಳೂರು — **ಬರಗೂರು ರಾಮಚಂದ್ರಪ್ಪ**

೧೫-೧೦-೧೯೮೨

# ಸಾಹಿತ್ಯದಲ್ಲಿ ಪ್ರಗತಿಶೀಲತೆ ಮತ್ತು ನಿರಂಜನರ ತಾತ್ವಿಕ ನೆಲೆ

— ಗುಡಿಹಳ್ಳಿ ನಾಗರಾಜ

"ಒಂದು ಸಮಾಜದ ಸಮಸ್ಯೆಗಳನ್ನು, ಜನತೆಯ ಆಶೋತ್ತರಗಳನ್ನು, ಸಾವು, ನೋವು, ಬಯಕೆ, ನಿರಾಶೆ, ಬದುಕುವ ಛಲದಿಂದ ಎಲ್ಲವನ್ನೂ ಅವರ ಎದುರಿಸುವ ಸಾಮರ್ಥ್ಯವನ್ನು —ಸಾಹಿತ್ಯ ಪ್ರತಿಬಿಂಬಿಸುತ್ತದೆ."

— ಟಾಲ್‌ಸ್ಟಾಯ್

ಸಮಾನತೆಯನ್ನು ಒಂದು ಮೌಲ್ಯವಾಗಿ ಸ್ವೀಕರಿಸಿ, ಅಂತಹ ಮೌಲ್ಯ ಪೊಂದರ ಕಡೆಗೆ ತುಡಿಯುತ್ತ, ಭವಿಷ್ಯದ ಕಡೆಗೆ ಮುಖ ಮಾಡಿರುವುದನ್ನು ಪ್ರಗತಿಶೀಲತೆ ಎಂದು ನಾವು ಒಪ್ಪಿಕೊಂಡಿದ್ದೇವೆ. ಇದು ಧ್ಯಾನದಿಂದ, ಪವಾಡದಿಂದ ಸಿದ್ಧಿಸುವುದಿಲ್ಲ. ಜಿಡ್ಡುಗಟ್ಟಿರುವ ವ್ಯವಸ್ಥೆಯೊಂದಿಗೆ ಸಮನ್ವಯ ಸಾಧಿಸುವುದರಿಂದಲೂ ಇದು ಸಾಧ್ಯವಿಲ್ಲ. ಯಥಾ ಸ್ಥಿತಿಯೊಂದಿಗೆ ಹೂಡುವ ಸಂಘರ್ಷ ಚಲನಶೀಲತೆಯನ್ನು ಸರಿದಾರಿಗೆ ತಂದು ಸಮಾಜವನ್ನು ಮತ್ತೆ ಚಲನಶೀಲವಾಗಿ ಮಾಡುತ್ತದೆ.

ಇದು ಸಾಹಿತ್ಯದಲ್ಲಿ ಮಾತ್ರ ಸಂಭವಿಸುವ ಕ್ರಿಯೆಯಲ್ಲ. ಸಾಹಿತ್ಯದಲ್ಲಿ ಮತ್ತು ಅದರಾಚೆಗಿನ ಸಮಾಜದಲ್ಲಿಯೂ ಒಟ್ಟೊಟ್ಟಿಗೆ ಅಥವಾ ಒಂದರ ಹಿಂದೊಂದು ಉಂಟಾಗುವ ಬದಲಾವಣೆಗಳ ಪ್ರಕ್ರಿಯೆ ಒಡಮೂಡಿದಾಗಲೇ ಪ್ರಗತಿಶೀಲತೆಯ ನೆಲೆ ಗಟ್ಟಿಯಾಗಿ ನೆಲೆಯೂರಲು ಸಾಧ್ಯ. ಸಮಾಜವು ಸಾಹಿತ್ಯದ ಅಂತಃಸತ್ವವಾದ್ದರಿಂದ ಪ್ರಗತಿಶೀಲತೆಯೂ ಅದರ ಭಾಗವಾಗ ಬೇಕು.

ಇಡೀ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಬದಲಾವಣೆಯ ಗಾಳಿ ಬೀಸಿ, ಸಾಹಿತ್ಯವು ರಾಜಾಶ್ರಯ ತೊರೆದು ದೊಡ್ಡ ಪ್ರಮಾಣದಲ್ಲಿ ಜನಪರವಾದದ್ದು ೧೨ನೇ ಶತಮಾನದ ವಚನಕಾರರಲ್ಲಿ ಎಂಬುದನ್ನು ಸಂಶೋಧಕರು, ಸಾಹಿತ್ಯ ಚರಿತ್ರಕಾರರು ಈಗಾಗಲೇ ದಾಖಲಿಸಿದ್ದಾರೆ. ಈಗ ಕೆಳಗಿನ ಹೇಳಿಕೆಗಳನ್ನು ಗಮನಿಸೋಣ :

"ನಾಗಚಂದ್ರ, ಜನ್ನ, ಪಂಪ ಮುಂತಾದ ಜೈನ ಕವಿಗಳು ರಾಜರುಗಳ ವರ್ಣನೆಯ ಪದ್ಧತಿಯನ್ನು ಧಿಕ್ಕರಿಸಿದರೂ, ಲೌಕಿಕ ಮತ್ತು ಧಾರ್ಮಿಕ ಎಂದು ಕವಲೊಡೆದಿದ್ದ ತಮ್ಮ ಸಮಸ್ತ ಕಾವ್ಯಚೈತನ್ಯವನ್ನು ಇಡಿಯಾಗಿ ಧರ್ಮಪರಗೊಳಿಸಿಬಿಡುತ್ತಾರೆ ಮತ್ತು ರಾಜಾಶ್ರಯ ಪಡೆಯುತ್ತಾರೆ. ವ್ಯಕ್ತಿ ಜೀವನದಲ್ಲಿ ಚಲನಶೀಲತೆಯನ್ನು ಪ್ರತಿಪಾದಿಸುತ್ತಿದ್ದ ವೈದಿಕ-ಜೈನ ಧರ್ಮಗಳು ಸಮಾಜ ಜೀವನದಲ್ಲಿ ಸ್ಥಗಿತತೆಯನ್ನು ಒಪ್ಪಿಕೊಂಡಿದ್ದವು. ಆದರೆ ವ್ಯಕ್ತಿ ಜೀವನದಂತೆ ಸಮಾಜ ಜೀವನದಲ್ಲಿಯೂ ಚಲನ ಶೀಲತೆಯನ್ನು ಸೈದ್ಧಾಂತಿಕವಾಗಿ ಒಪ್ಪಿಕೊಂಡಿದ್ದ ವಚನಕಾರರು ವರ್ಗಭೇದ, ಲಿಂಗಭೇದ, ವರ್ಣಭೇದ ಮೊದಲಾದ ಸಾಮಾಜಿಕ ಅನಿಷ್ಟ ವ್ಯವಸ್ಥೆಯ ವಿರುದ್ಧ ಸಾಹಿತ್ಯದ ಮೂಲಕ ಚಳುವಳಿ ಹೂಡಿದರು."೧

"ರಾಜಸತ್ತೆ ರಾಜ್ಯಾಧಿಕಾರಿಗಳಿಂದ ತಪ್ಪಿಸಿಕೊಂಡರೂ ಕಾಲಕ್ರಮದಲ್ಲಿ ಜನರ ಹತ್ತಿರ ಹೋಗದೆ ಧರ್ಮಸತ್ತೆ, ಧರ್ಮಾಧಿಕಾರಿಗಳ ಆಶ್ರಯಕ್ಕೆ ಹೋಯಿತು. ಜೈನ-ಬ್ರಾಹ್ಮಣ ಸಾಹಿತ್ಯಗಳಂತೆ ವೀರಶೈವವೂ ಹಿಂದೂ ವೀರಶೈವ ಆದುದರ ದುರಂತವಿದು."೨

ಪಂಪನಂಥ ಕವಿಗಳು ತಮ್ಮ ಕಾವ್ಯಗಳನ್ನು ಸಂಪೂರ್ಣ ಧರ್ಮಪರಗೊಳಿಸಿದರೆಂದು ಹೇಳಲಾಗದಿದ್ದರೂ ಮೇಲಿನ ಹೇಳಿಕೆಗಳು ಕನ್ನಡ ಸಾಹಿತ್ಯದ ಒಂದು ಮುಖ್ಯ ವ್ಯಾಖ್ಯಾನವಾಗಿದೆ ಎನ್ನಬಹುದು.

ಜಡತನದ ಬಗ್ಗೆ ಅಪಾರ ಅನುಕಂಪ ಮಿಡಿದ ದಾಸ ಸಾಹಿತ್ಯವೂ ವ್ಯಕ್ತಿ ಸೀಮಿತವಾದ್ದರಿಂದ ಚಳುವಳಿಯಾಗಿ ಮೂಡಿ ಬರಲಿಲ್ಲ. ಆದ್ದರಿಂದಲೇ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವಚನಕಾರರಲ್ಲಿ ಮಾತ್ರ ಗಣನೀಯ ಚಲನಶೀಲತೆಯನ್ನು

ಗುರುತಿಸುತ್ತೇವೆ. "ಕುಲಕುಲವೆಂದು ಹೊಡೆದಾಡಬೇಡಿರಿ ಎಂಬ ದಾಸರ ಪದಗಳಲ್ಲಿ ವ್ಯಕ್ತಿ ಜೀವನದ ಚಲನಶೀಲತೆಗೆ ಬೇಕಾದ ನೀತಿ ಇದೆ. ಕೃತಿಯ ಮಟ್ಟದಲ್ಲಿ ಆಚರಣೆಯಾಗುವ ಚಳುವಳಿಗಳಾವೂ ಈ ಸಂದರ್ಭದಲ್ಲಿ ಬರದೇ ಇದ್ದುದರಿಂದ ಇದು ಹೇಳಿಕೆಯ ಮಟ್ಟಕ್ಕೆ ಉಳಿಯಿತು".೩ ಎಂಬ ಡಾ॥ ಕಲ್ಬುರ್ಗಿ ಅವರ ಮಾತುಗಳು ಈ ಚರ್ಚೆಯನ್ನೇ ಬೆಳೆಸಿವೆ. (ಅನುಭಾವಿ ಕವಿಗಳಲ್ಲಿ ಮೂಡಿರುವ ಜನಪರ ಕಾಳಜಿಗಳು ವಸಾಹತುಶಾಹಿಯ ಹಿನ್ನೆಲೆಯಲ್ಲಿ ಬೆಳೆಸಬೇಕಾಗಿದೆ.) ಅನಂತರದ ಬಹುತೇಕ ಕನ್ನಡ ಕವಿಗಳಲ್ಲಿ ಪ್ರಗತಿಪರ ಆಶಯಗಳು ಅಲ್ಲಲ್ಲಿ ಮೂಡಿ ಬಂದಿದ್ದರೂ ಅದು ಅಂಶಿಕವಾಯಿತೇ ಹೊರತು ಪ್ರಧಾನವಾಗಲಿಲ್ಲ.

ಮತ್ತೆ ನಾವು ೨೦ನೇ ಶತಮಾನಕ್ಕೆ ಬರಬೇಕು. ದಾಸ್ಯದ ನೊಗ ಕಳಚಿ ವಿಮೋಚನೆಹೊಂದಬೇಕೆಂಬ ಕನಸು ಕುಡಿಯೊಡೆದು ಜಗತ್ತಿನ ಅನೇಕ ರಾಷ್ಟ್ರಗಳು ಜಾಗೃತಿಗೊಂಡಾಗ ರಷ್ಯಾದೇಶ ಜರ್ಮನಿಯ ನಾಜಿ ಸಾಮ್ರಾಜ್ಯವಾದದ ವಿರುದ್ಧ ಸೆಟೆದು ನಿಂತು ಯಶಸ್ವಿಯಾದದ್ದು ಪ್ರಗತಿಶೀಲ ಚಳುವಳಿಯ ಉದಯಕ್ಕೆ ಸ್ಫೂರ್ತಿಯಾಯಿತು, ಜಗತ್ತಿನ ಅನೇಕ ರಾಷ್ಟ್ರಗಳಲ್ಲಿ ಉದಯವಾದ ಪ್ರಗತಿಶೀಲತೆಯ ಒಂದು ಅಂಗವಾಗಿ ಭಾರತದಲ್ಲಿಯೂ ಅದರ ಒಂದು ಅಂಗವಾಗಿ ಕರ್ನಾಟಕದಲ್ಲಿಯೂ ಆರಂಭವಾಯಿತು, ಸ್ವಾತಂತ್ರ್ಯ ಗಳಿಕೆಯ ಆದರ್ಶ ಮತ್ತು ರೊಮ್ಯಾಂಟಿಕ್ ಭಾವನೆಗಳ ಉತ್ಸಾಹದಿಂದ ಯಥೇಷ್ಟವಾಗಿ ಸೃಷ್ಟಿಯಾಗುತ್ತಿದ್ದ ಕನ್ನಡದ ನವೋದಯ ಸಾಹಿತ್ಯದ ಬೆನ್ನಿಗೆಯೇ ಬಂದದ್ದು ಪ್ರಗತಿಶೀಲ ಸಾಹಿತ್ಯ.

ಶೋಷಣೆಯೇ ಮುಖ್ಯವಾಗಿರುವ ಸಮಾಜದಲ್ಲಿ ತಾತ್ವಿಕವಾಗಿ ಅದರ ವಿರುದ್ಧ ಪ್ರತಿಭಟಿಸುವುದು ಪ್ರಗತಿಶೀಲತೆ ಎಂಬ ಧ್ಯೇಯ ಅಖಿಲ ಭಾರತ ಮಟ್ಟದ ಪ್ರಗತಿಶೀಲ ಚಳುವಳಿಯಲ್ಲಿ ಹಾಸು ಹೊಕ್ಕಾಗಿತ್ತು. ಕರ್ನಾಟಕದಲ್ಲಿ ಪ್ರಗತಿಶೀಲತೆಯ ಬಾವುಟ ಎತ್ತಿ ಹಿಡಿದು ಅದರ ಮುಂಚೂಣಿಯಲ್ಲಿ ನಿಂತ ಅ. ನ. ಕೃ., ತ.ರಾ.ಸು. ಅಂತಹವರು ತಾತ್ವಿಕವಾಗಿ ಅನೇಕ ವಿರೋಧಾಭಾಸಗಳಿಂದ ಕೂಡಿದ್ದರು. ಅ.ನ.ಕೃ.ಗೆ ರಷ್ಯಾದ ಬಗ್ಗೆ ಮೆಚ್ಚುಗೆಯೊಂದನ್ನು ಬಿಟ್ಟರೆ, ಪ್ರಗತಿಶೀಲ ಆಶಯ ಎಂಬುದು ಅವರ ಬರವಣಿಗೆಯಲ್ಲಾಗಲೀ,

ಭಾಷಣದಲ್ಲಾಗಲೀ ಮೂಡಿ ಬಂದದ್ದು ವಿರಳ. ಶೋಷಕ-ಶೋಷಿತರ ಸಮಾಜ ವ್ಯವಸ್ಥೆಯಲ್ಲಿ ಶೋಷಕರಿಗೆ ಆಪ್ಯಾಯಮಾನವಾದ ಗಾಂಧೀಜಿಯವರ ಟ್ರಸ್ಟೀಶಿಪ್ ಸಿದ್ಧಾಂತವನ್ನು ಅ. ನ. ಕೃ. ಮೆಚ್ಚಿಕೊಂಡಿದ್ದರು. ಹಿಂದೂ ಧರ್ಮದ ಪುನರುಜ್ಜೀವನದ ವಕ್ತಾರರಂತೆ ಅ. ನ. ಕೃ. ಮತ್ತು ಅವರ ಹಿಂಬಾಲಕರು ವರ್ತಿಸಿದರು. ಇದು ಪ್ರಗತಿಶೀಲ ಸಾಹಿತ್ಯ ಚಳುವಳಿಯು ಒಪ್ಪಿಕೊಂಡ ಆಶಯ ಆಗಿರಲಿಲ್ಲ. ಮುಂದೆ ಪ್ರಗತಿಶೀಲರಲ್ಲಿ ಬಿರುಕು ಮೂಡಿ ನಿರಂಜನ, ಕಟ್ಟೀಮನಿ, ಕೋ. ಚೆನ್ನಬಸಪ್ಪ, ದ. ಬಾ. ಕುಲಕರ್ಣಿ. ಬಿ. ಶಂಕರಭಟ್ಟ ಅಂತಹವರನ್ನು ಸಂಘದಿಂದ ಕೈಬಿಡಲಾಯಿತು. ಪ್ರಗತಿಶೀಲ ಆಶಯಗಳಿಗೆ ಬದ್ಧರಾಗಿ ಬರೆದವರು ಮತ್ತು ಅದನ್ನು ಬದುಕಿದವರಾದ ಕಟ್ಟೀಮನಿ, ನಿರಂಜನ ನಗಣ್ಯರಾದರು. ಕರ್ನಾಟಕದಲ್ಲಿ ತಮ್ಮ ನಾಟಕಗಳಲ್ಲಿ ಪ್ರಗತಿಪರತೆಯನ್ನು ಪ್ರಮುಖ ವಾಹಿನಿ ಮಾಡಿಕೊಂಡ ಶ್ರೀರಂಗರು ಆರ್ಥಿಕ ವಿಚಾರಗಳಲ್ಲಿ ವ್ಯವಸ್ಥೆಯ ಪರವಾದ ಯಥಾಸ್ಥಿತಿವಾದವನ್ನು ಪ್ರತಿ ಪಾದಿಸಿದರೂ, ವೈಯುಕ್ತಿಕ ನೆಲೆಯಲ್ಲಿ 'ಕ್ರಾಂತಿಕಾರಿ'ಯಾಗಿದ್ದು ಗಂಡು ಹೆಣ್ಣಿನ ಸಂಬಂಧವನ್ನು ವೈಚಾರಿಕವಾಗಿ ಕಾದಂಬರಿಗಳಲ್ಲಿ ಚಿತ್ರಿಸಿದ ಶಿವರಾಮ ಕಾರಂತರು, ಪರಿಸರ ಮತ್ತು ಸಾಹಿತ್ಯಲೋಕಕ್ಕೆ ಅದುವರೆಗೂ ಅಪರಚಿತರಾಗಿ ಉಳಿದಿದ್ದ ಶೂದ್ರಲೋಕದ ದಟ್ಟ ಚಿತ್ರಣವನ್ನು ನೀಡಿದ ಕುವೆಂಪುರವರು ಈ ಚಳುವಳಿಯ ಆಚೆಯೇ ಉಳಿದದ್ದು ಅಚ್ಚರಿಯ ವಿಷಯ.

ಪ್ರಗತಿಶೀಲ ಸಂಘದ ಕಾರ್ಯದರ್ಶಿಗಳಲ್ಲೊಬ್ಬರಾಗಿದ್ದು ನಂತರ ಅದರಿಂದ ಹೊರಬಂದ ಎಸ್. ಅನಂತನಾರಾಯಣ ಅವರು ಹೀಗೆ ಅಭಿಪ್ರಾಯ ಪಡುತ್ತಾರೆ: "ಕಾರಂತ. ಶ್ರೀರಂಗರು ಪ್ರಗತಿಶೀಲ ಅಲ್ಲ ಎಂದು ಘೋಷಿಸಿದ ಸಂಘ ತಾನು ಸೃಷ್ಟಿಸಿಕೊಂಡ ಸಂದಿಗ್ಧ ದ್ವಂದ್ವಕ್ಕೆ ತಾನೇ ಬಲಿಯಾಯಿತು."[೪]

ಪ್ರಗತಿಶೀಲರಲ್ಲಿ ಕೆಲವರ ನಡತೆಯನ್ನು ಕಟ್ಟೀಮನಿ ಅವರು ಹೀಗೆ ಬಹಿರಂಗ ಪಡಿಸಿದ್ದಾರೆ. "ಪ್ರಗತಿಶೀಲರ ಗುಂಪಿನಲ್ಲಿದ್ದ ಅಡಿಗ, ತ.ರಾ.ಸು., ಅರ್ಚಕ ವೆಂಕಟೇಶ, ನಾಡಿಗೇರ್ ಇವರಾರೂ ಜನಿವಾರ ತ್ಯಜಿಸಿರಲಿಲ್ಲ. ವೈದಿಕ ಧರ್ಮದ ಬಗೆಗೆ ಅವರೆಲ್ಲರಿಗೂ ತುಂಬ ಅಭಿಮಾನವಿದ್ದುದು ಆನಂತರ ನನಗೆ ಗೊತ್ತಾಯಿತು. ಗುಂಪಿನ ನಾಯಕರೆನಿಸಿಕೊಂಡಿದ್ದ ಅ.ನ.ಕೃ. ಮಾತ್ರ ಜನಿವಾರ

ಧರಿಸುತ್ತಿರಲಿಲ್ಲ. ವೈದಿಕ ಧರ್ಮದ ಕಂದಾಚಾರಗಳನ್ನು ಅವರು ಸಹಿಸು ತ್ತಿರಲಿಲ್ಲ. ಇದೊಂದು ವಿಷಯದಲ್ಲಿ ಅ.ನ.ಕೃ., ಶ್ರೀರಂಗ, ಕಾರಂತ ಮೂವರದೂ ಒಂದೇ ರೀತಿ. ಪ್ರಗತಿಶೀಲ ತತ್ವಗಳನ್ನು ದೈನಂದಿನ ಆಚಾರಣೆಯಲ್ಲೂ ತಂದವರು ಶ್ರೀರಂಗರು 'ಹರಿಜನ್ವಾರ' ಎಂಬ ನಾಟಕವನ್ನು ಬರೆದು ಬ್ರಾಹ್ಮಣ ಸಮಾಜದ ವಿರುದ್ಧ ಬಹಿರಂಗವಾಗಿಯೆ ಬಂಡು ಹೂಡಿದರು. ಬ್ರಾಹ್ಮಣೇತರ ವಧುವನ್ನು ಮದುವೆಯಾಗಿ ಕಾರಂತರೂ ಒಂದು ರೀತಿಯ ಬಂಡುಗಾರರೆನಿಸಿಕೊಂಡರು."[೫] ಪ್ರಗತಿಶೀಲರಲ್ಲಿ ಹಲವರ ದ್ವಂದ್ವಕ್ಕೆ ಹಿಡಿದ ಕನ್ನಡಿ ಇದು.

ಆದರೆ ಇವರ ಮಧ್ಯೆಯೂ ಪ್ರಗತಿಪರ ಆಶಯಕ್ಕೆ ಧಕ್ಕೆ ಉಂಟು ಮಾಡದೆ, ಬದುಕಿನಲ್ಲಿ ಬರಹದಲ್ಲಿ ಕೃತಿಗಿಳಿಸಿದ ಕಟ್ಟೀಮನಿ, ನಿರಂಜನ ಇಂದಿಗೂ ಪ್ರಗತಿಶೀಲ ಚಳುವಳಿಯ ಪ್ರಾತಿನಿಧಿಕ ವ್ಯಕ್ತಿಗಳು ಎಂಬ ಅಂಶ ನಮ್ಮ ಸಾಹಿತ್ಯ ಸಂದರ್ಭದಲ್ಲಿ ಅವರ ಬಗ್ಗೆ ವ್ಯಾಪಕವಾಗಿ ಚರ್ಚೆಯಾಗಿರ ದಿದ್ದರೂ, ಸತ್ಯ. "ಕೃತಿಗಳನ್ನು ಅಳೆಯುವ ಮಾನದಂಡ ವ್ಯಕ್ತಿಗತವಾಗಿಯೇ ಇದ್ದುದರಿಂದ ಸಾಮಾಜಿಕ ಕಾಳಜಿಯುಳ್ಳ ಕವಿತೆ ಎರಡನೇ ದರ್ಜೆಯ ಕವಿತೆಯೆಂದು ಹೇಳಲಾಗಿದೆ".[೬] – ಈ ವಿಮರ್ಶಾ ನೆಲೆಯೂ ನಿರಂಜನ, ಕಟ್ಟೀಮನಿಯವರನ್ನು ನಿರ್ಲಕ್ಷಿಸಲು ಒಂದು ಕಾರಣವಾಗಿರಬಹುದು.

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ವಿಮರ್ಶೆ ಗಟ್ಟಿಗೊಂಡಿದ್ದ ನವ್ಯರ ಕಾಲದಲ್ಲಿ ಅವರು 'ತಮ್ಮ ತಾತ್ವಿಕ ಹಿನ್ನೆಲೆಯಲ್ಲಿಯೇ ಪ್ರಗತಿಶೀಲ ಕೃತಿಗಳನ್ನು ಅಳೆದರು. ಪ್ರಗತಿಶೀಲರಲ್ಲಿಯೇ ವಿಮರ್ಶಾ ಪರಂಪರೆಯೊಂದು ಹುಟ್ಟಿ ಕೊಳ್ಳಲಿಲ್ಲ. ಆದ್ದರಿಂದಲೇ ಆ ಚಳುವಳಿಯಲ್ಲೂ ಅಳಿದುಳಿದ ಗಟ್ಟಿಕಾಳುಗಳು ಬಹಳಷ್ಟು ಕಾಲ ಚರ್ಚೆಯಾಗದೇ ಉಳಿದವು. (ಬಂಡಾಯ ಸಾಹಿತ್ಯ ಚಳುವಳಿಯ ಈ ಸಂದರ್ಭದಲ್ಲಿ ಮಾತ್ರ ಇತ್ತ ಕಡೆ ಗಮನಹರಿಸಿದೆ.)

ಪ್ರಗತಿಶೀಲ ಚಳುವಳಿಯು ಮುಂಚೂಣಿ ನಾಯಕರ ಸ್ವಪ್ರತಿಷ್ಠೆಯಿಂದ ಕೇವಲ ಎರಡು ದಶಕಕ್ಕೆ ಅವಸಾನ ಹೊಂದಿದ್ದರೂ. ಅಂದಿನ ಸಮಕಾಲೀನ ಬರಹಗಾರರ ಮೇಲೆ ಪರೋಕ್ಷ ಪ್ರಭಾವವನ್ನು ಬೀರಿದ್ದು ಈಗ ಇತಿಹಾಸದ ಸಂಗತಿಯಾಗಿದೆ.

ನವೋದಯದವರ ಮೇಲೆ ಹರಿಹಾಯುತ್ತಿದ್ದ ಪ್ರಗತಿಶೀಲರ ತಾತ್ವಿಕ ನಿಲುವು ನವೋದಯದ ಹಿರಿಯ ಲೇಖಕರಿಂದ ಹಿಡಿದು ಬಹುತೇಕ ಎಲ್ಲರ ಮೇಲೂ ಪ್ರಭಾವ ಬೀರಿದ್ದು ಕುತೂಹಲಕಾರಿ ಅಂಶ. ನವೋದಯದ ಲೇಖಕರಲ್ಲಿ ಪ್ರಗತಿಪರ ಆಶಯ ಆಂಶಿಕವಾಗಿಯಾದರೂ ಕಾಣಿಸಿಕೊಂಡಿರುವುದಕ್ಕೆ ಪ್ರಗತಿಶೀಲರ ಕಾಣಿಕೆಯೇ ಹೆಚ್ಚಿನದು ಎಂಬ ಮಾತು ಅತಿಶಯೋಕ್ತಿಯದಲ್ಲ.

ಪ್ರಗತಿಶೀಲ ಆಶಯವೇ ಹಾಗೆ, ಅದಕ್ಕೆ ಪ್ರಭಾವ ಬೀರುವ ಗುಣವೇ ಹೆಚ್ಚು. ತಾನೇ ಪ್ರಭಾವಕ್ಕೆ ಒಳಗಾಗುವುದು ಕಡಿಮೆ ಪ್ರಗತಿಶೀಲರು ಕಾವ್ಯ ನಾಟಕಗಳಲ್ಲಿ ಹೆಚ್ಚಿನ ಸಾಧನೆ ಮಾಡದಿದ್ದರೂ ಅಂದಿನ ಸಮಕಾಲೀನ ಬರಹಗಾರರ ಮೇಲೆ ಪರೋಕ್ಷ ಪ್ರಭಾವ ಬೀರಿದ್ದನ್ನು ನವ್ಯ ವಿಮರ್ಶಕರಾದಿಯಾಗಿ ಎಲ್ಲರೂ ಒಪ್ಪಿಕೊಂಡಿದ್ದಾರೆ. "ಡಾ॥ ಬಿ. ಸಿ. ರಾಮಚಂದ್ರ ಶರ್ಮರ 'ಹೃದಯ ಗೀತೆ' ಕ್ಕೆ ಸು. ರಂ. ಎಕ್ಕುಂಡಿಯವರ ಜನಕಾವ್ಯ ಪರವಾದ ಮಾತು, ಗೋಪಾಲಕೃಷ್ಣ ಅಡಿಗರು ಅದೇ ಸಂಕಲನಕ್ಕೆ ಹೊಸ ಕಾವ್ಯದ ಪರವಾಗಿ ಬರೆದ ಮಾತು ಅಂದಿನ ಸಂಕ್ರಮಣ ಸ್ಥಿತಿಯನ್ನು ಸೂಚಿಸುತ್ತದೆ. ಜಿ. ಪಿ. ರಾಜರತ್ನಂ ಅವರ 'ನಾಡಿಗ್ ಬಡವ ಸರ್ಕಸ್ ಸಿಮ್ಮ', 'ಬಡಪೋನ್ ದೇವ್ರು', ಕುವೆಂಪು ಅವರ 'ಕಲ್ಕಿ', 'ದೇವರು ಪೂಜಾರಿ', 'ಇಂದಿನ ದೇವರು', 'ಲೆನಿನ್', ಅಂಬಿಕಾತನಯದತ್ತರ 'ತುತ್ತಿನ ಚೀಲ', 'ಅನ್ನಯಜ್ಞ', 'ಪುಟ್ಟ ವಿಧವೆ', 'ಕುರುಡು ಕಾಂಚಾಣ,' ಗೋಪಾಲಕೃಷ್ಣ ಅಡಿಗರ 'ನಾವೆಲ್ಲರೂ ಒಂದೇ ಜಾತಿ', 'ಕಟ್ಟುವೆವು ನಾವು', 'ಸುಲಿಗೆಯೆಂಬ ಯಾಗ', 'ಸಮಾಜ ಭೈರವ' ಕವನಗಳ ರಚನೆಗೆ ಅಂದಿನ ಪ್ರಗತಿಶೀಲ ವಾತಾವರಣ ಕಾರಣವಾಯಿತು."೭

ಪ್ರಗತಿಶೀಲ ಸಾಹಿತ್ಯದ ವೇದಿಕೆಗಳಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳದಿದ್ದಾಗ್ಯೂ ಅದರ ಅಂತಃಸ್ಸತ್ವವನ್ನು ಹೀರಿಕೊಂಡ ಚದುರಂಗ ಮತ್ತು ಬಲ್ಲಾಳರು ಇಂದಿಗೂ relevant ಆದ ಕೃತಿಗಳನ್ನು ರಚಿಸುತ್ತಿರುವುದೇ ಪ್ರಗತಿಶೀಲ ಎಂದಿಗೂ ಬತ್ತದ ಸೆಲೆ ಎಂಬುದರ ಕುರುಹಾಗಿದೆ.

ಪ್ರಗತಿಶೀಲದ ಅವಸಾನದ ಪಾಲುದಾರರಾದರೂ ಸಹ ಅ.ನ.ಕೃ.

ಅವರು 'ಜೀವನಯಾತ್ರೆ', 'ಸಂಧ್ಯಾರಾಗ' ದಂತಹ, ತ.ರಾ.ಸು. ಅವರು 'ಚಂದವಳ್ಳಿಯ ತೋಟ' ದಂತಹ ಪ್ರಗತಿಪರ ಕೃತಿಗಳನ್ನು ರಚಿಸಿದ್ದಾರೆ ಎಂಬುದು ಗಮನಾರ್ಹ.

"ಪ್ರಗತಿಶೀಲರ ನೆರವು ನವ್ಯರ ಯಶಸ್ವಿಗೆ ಸ್ವಲ್ಪ ಮಟ್ಟಿಗಾದರೂ ಕಾರಣ"೮ ಎನ್ನುವ ಜಿ. ಎಸ್. ಆಮೂರರು, "೧೯೪೦ ರಷ್ಟು ಹಿಂದೆಯೇ ನವೋದಯಕ್ಕಿಂತ ಭಿನ್ನವಾದೊಂದು ಸಂವೇದನೆಯನ್ನು ಸೃಷ್ಟಿಸಿದ- ಪ್ರಮುಖವಾಗಿ ಅ.ನ.ಕೃ., ತ.ರಾ.ಸು., ಕಟ್ಟೀಮನಿ, ನಿರಂಜನರ ಕಥೆ ಕಾದಂಬರಿಗಳಲ್ಲಿ ಕಾಣಿಸಿಕೊಂಡರೂ ಶ್ರೀ ರಂಗರಂಥ ನಾಟಕಕಾರರು, ಅಡಿಗ, ರಾಮಚಂದ್ರ ಶರ್ಮರಂಥ ಕವಿಗಳನ್ನು ಪ್ರಭಾವಿಸಿದ – ಪ್ರಗತಿಶೀಲತೆ ಕನ್ನಡ ಸಾಹಿತ್ಯವನ್ನು ವಾಸ್ತವವಾದದ ದಿಕ್ಕಿನಲ್ಲಿ ಕೊಂಡೊಯ್ದ ಹಿನ್ನೆಲೆಯಲ್ಲಿ ಪ್ರಗತಿಶೀಲರು ಸಾಧಿಸಿದ್ದು ಮಹತ್ವಪೂರ್ಣವೆಂಬುದನ್ನು ಒಪ್ಪಲೇಬೇಕು."೯ ಎಂದು ಪ್ರತಿಪಾದಿಸುತ್ತಾರೆ.

* * * *

ಪ್ರಗತಿಶೀಲ ಚಳುವಳಿಯ ಮುಂಚೂಣಿಯಲ್ಲಿ ಇಲ್ಲದೇ ಇದ್ದರೂ ಸಹ ಅದರ ಕೇಂದ್ರ ಬಿಂದುವಾದ ನಿರಂಜನ ಪ್ರಗತಿಶೀಲ ಧೋರಣೆಯನ್ನು ಸವಾಲಾಗಿ ಸ್ವೀಕರಿಸಿ ಯಶಸ್ವಿಯಾದರು ಎಂಬ ಕಾರಣಕ್ಕೆ ನಿರಂಜನರನ್ನು ಕುರಿತ ಅಭ್ಯಾಸ ಕುತೂಹಲಕಾರಿಯಾದುದು.

"ನಿಜವಾದ ಸಾಹಿತ್ಯ ಕೃತಿ ತತ್ವಗಳನ್ನು, ಸಿದ್ಧಾಂತಗಳನ್ನು ಸೃಜನಶೀಲವಾಗಿ ಸ್ವೀಕರಿಸುವುದರಿಂದ ಚಳುವಳಿಯೊಳಗಿದ್ದೂ ಉತ್ಕೃಷ್ಟವಾಗ ಬಲ್ಲದು."೧೦ ಎಂಬುದಕ್ಕೆ ನಿರಂಜನರೇ ಉದಾಹರಣೆ.

"ಪ್ರಗತಿಶೀಲತೆಯ ಪರಿಚಯ ನನಗಾದದ್ದು ೧೯೪೩ ರಲ್ಲಿ ಆ ವೇಳೆಗಾಗಲೆ ನಾನು ಸಾಕಷ್ಟು ನುರಿತ ಕತೆಗಾರನಾಗಿದ್ದೆ., ಬದುಕಿಗೆ ಸ್ಪಂದಿಸಿ ಬರೆಯುತ್ತಿದ್ದುದರಿಂದ ಕತೆಗಳಲ್ಲಿ ಹೆಚ್ಚಿನವು ಅರ್ಥಪೂರ್ಣವಾಗಿದ್ದವು. ಮುಂದೆ ಘೋಷಣೆಗಳಿಂದ ಬಂತು ವಿಶೇಷ ಆಯಾಮ. ಒಳ್ಳೆಯ ಪರಿಣಾಮ, ಕ್ರ... ಪರಿಣಾಮ ಬರಹ."೧೧ ಎಂಬ ಎಚ್ಚರಿಕೆಯಿಂದಲೇ ಮೈದೋಳ್ದಾ

ಕಷ್ಟಾಗಿ ಸೃಜನಶೀಲತೆಯ ಸವಾಲನ್ನು ಸ್ವೀಕರಿಸಿದ ಕಾರಣಕ್ಕೆ 'ಚಿರಸ್ಮರಣೆ', 'ಮೃತ್ಯುಂಜಯ'ದಂತಹ ಮೇರುಕೃತಿಗಳನ್ನು, 'ಕೊನೆಯ ಗಿರಾಕಿ', 'ತಿರುಕಣ್ಣನ ಮತದಾನ' ದಂತಹ ಶ್ರೇಷ್ಠ ಕತೆಗಳು 'ಸಮ್ರಾಜ್ಞಿ' ಯಂತಹ ಚೊಕ್ಕ (Precise) ನಾಟಕ 'ಕಣ್ಣಿದ್ದವರಿಗೂ ನೀನೇ ಶಿವಾ!'ದಂತ ಸ್ವಾರಸ್ಯಕರ ಬಾನುಲಿ ರೂಪಕ ಸಾಧ್ಯವಾಯಿತು. ಎಂಬುದರ ಚರ್ಚೆ ಇದೀಗ ತಾನೆ ಆರಂಭವಾಗಿದೆ.

ನಿರಂಜನ ಸುಪ್ರಸಿದ್ಧ ಅಂಕಣಕಾರರು, ಪತ್ರಕರ್ತರು ನಿರಂಜನ ಶ್ರೇಷ್ಠ ಸೃಜನಶೀಲ ಅನುವಾದಕರೂ ಹೌದು ಎಂಬುದಕ್ಕೆ ಗಾರ್ಕಿಯ 'ತಾಯಿ' ಅನುವಾದವೇ ಸಾಕ್ಷಿ. ಇದು ಸಂಸ್ಕೃತ ಭೂಯಿಷ್ಠ ಅನುವಾದದಿಂದ ಅದು ಹೊರತಾಗಿ ಲವಲವಿಕೆಯಿಂದ ಕೂಡಿದೆ."೧೨

ಅವರ ನೇತೃತ್ವದಲ್ಲಿ ಹೊರ ಬಂದ 'ಜ್ಞಾನ ಗಂಗೋತ್ರಿ' ಯ ಏಳು ಸಂಪುಟಗಳು, ವಿಶ್ವಕಥಾ ಕೋಶ'ದ ೨೫ ಸಂಪುಟಗಳು ಅವರ ಆಸಕ್ತಿ ವಲಯದ ವಿಸ್ತಾರವನ್ನು, ಜಗತ್ತಿನ ಎಲ್ಲ ಜ್ಞಾನಗಳ ಅರಿವು ಪ್ರಗತಿಶೀಲ ಧೋರಣೆಗೆ ಮುಖ್ಯ ಎಂಬ ತಾತ್ವಿಕ ನೆಲೆಯನ್ನು ಪ್ರಕಟಿಸುವ ಉದಾಹರಣೆಯಾಗಿವೆ.

ಸಂದರ್ಶನಗಳ ಬರವಣಿಗೆಯಲ್ಲೂ ನಿರಂಜನ ವಿಶಿಷ್ಟತೆಯನ್ನು ಮೆರೆದಿದ್ದಾರೆ. ಪ್ರಖ್ಯಾತ ನಾಟಕಕಾರ, ಕಾದಂಬರಿಕಾರ ಬಿ. ಪುಟ್ಟಸ್ವಾಮಯ್ಯ ('ಕ್ರಾಂತಿ ಕಲ್ಯಾಣ'ದ ತಾತಾ) ಅವರ ಸಂದರ್ಶನದಲ್ಲಿ ಪತ್ರಿಕೋದ್ಯಮ ಸೃಷ್ಟ್ಯಾತ್ಮಕ ಬರವಣಿಗೆಗೆ ಲೇಖನವನ್ನು ಅಣಿಗೊಳಿಸುವ ಬಗೆಯನ್ನು ವಿವರಿಸುತ್ತಾರೆ. ಸತ್ಯನಿಷ್ಠೆ ವಿವರಗಳನ್ನು ತಿಳಿಯುವ ಕುತೂಹಲ, ಸಮರ್ಥ ಪ್ರತಿಪಾದನೆ - ಪತ್ರಿಕೋದ್ಯೋಗಿಗೆ ಎಷ್ಟು ಅಗತ್ಯವೋ ಬೇರೆ ಬರಹಗಾರನಿಗೂ ಅಷ್ಟೇ ಅಗತ್ಯ"೧೩

"ಬುದ್ಧಿ ಭಾವ ಬದುಕು" ಹೆಸರೇ ಸೂಚಿಸುವಂತೆ ಬುದ್ಧಿ ಭಾವವನ್ನು ಸಮತೋಲನದಿಂದ ಮೇಳೈಸಿದ ಅಪೂರ್ವವಾದ ವಿಮರ್ಶಾಕೃತಿ ಇಲ್ಲಿ ಕೂದಲು ಸೀಳುವ ತರ್ಕಕ್ಕಿಂತ ಬರಹ ಮತ್ತು ಬದುಕು ಪ್ರಾಮುಖ್ಯತೆ

ಪಡೆಯುತ್ತದೆ. ಇದಕ್ಕೆ ಮತ್ತೊಂದು ಅಪರೂಪದ ಸೇರ್ಪಡೆ ಅವರ "ನುಡಿಚಿತ್ರ" ವಿಮರ್ಶಾ ಕೃತಿ. ಇದರಲ್ಲಿ ಬರುವ ಕುಳಕುಂದ ಶಿವರಾಯ ನಿರಂಜನ ಸಂದರ್ಶನ (ತಮ್ಮನ್ನು ತಾವೇ ಸಂದರ್ಶಿಸಿಕೊಳ್ಳುವುದು ಆತ್ಮ ವಿಮರ್ಶೆಗೆ - ಪ್ರಶಂಸೆಗಲ್ಲ! —ಹಿಡಿದ ಕೈಗನ್ನಡಿ) "ಯಾರದೋ ಪಿಎಚ್.ಡಿ. ಥೀಸಿಸ್‌ನಲ್ಲಿ ದಾಖಲೆಯಾಗ್ತೇವೆ - ಇಬ್ಬರೂ" ಎಂದು ತಮ್ಮನ್ನೇ ಲೇವಡಿಗೊಳಪಡಿಸಿಕೊಳ್ಳುವ ನಿರಂಜನ ಅವರಿಗೆ ಭ್ರಮೆಗಳಿಲ್ಲ. ಆದರೆ ಅವರೆಂದೂ ಕನಸುಗಾರರಾಗಿರುವುದನ್ನು ಕೈ ಬಿಟ್ಟವರಲ್ಲ.

೧೯೪೫ ರಲ್ಲಿ "ವಾಣಿ" ಪತ್ರಿಕೆಯಲ್ಲಿ ಬರೆದ ಲೇಖನವೊಂದರಲ್ಲಿ "ಕಳೆದ ೧೦ ವರ್ಷಗಳ ಸಾಹಿತ್ಯವನ್ನು ನೋಡಿದರೆ ಬೆಳವಣಿಗೆಯಿಲ್ಲ. ಭಾವನೆ ಬರಡಾಗಿದೆ ಕಾಲದೊಡನೆ ಪರಿಸ್ಥಿತಿಯೊಡನೆ ಕವಿಗಳೂ ಸಾಹಿತ್ಯವೂ ಬೆಳೆಯುತ್ತಿಲ್ಲ."೧೨ ಎಂಬ ಆತಂಕ ಸಹ ನಿರಂಜನರು ರೂಡಿಸಿಕೊಂಡ ವಿಮರ್ಶನ ವಿಮರ್ಶೆಯ ದ್ಯೋತಕವಾಗಿದೆ.

ಸಾಹಿತ್ಯ ದಲಿತರಿಗೆ ಮುಟ್ಟದೇ ಇರುವ ಸ್ಥಿತಿ ಬಗ್ಗೆ ನಿರಂಜನರಿಗೆ ಸ್ಪಷ್ಟವಾದ ಅರಿವಿದೆ. "ಸಾಹಿತ್ಯ ಜನ ಸಾಮಾನ್ಯನನ್ನು ಮುಟ್ಟಬೇಕಾದರೆ ಹಾಡು-ನಾಟಕಗಳ ಮೂಲಕ ಮಾತ್ರ ಎಂಬ ಬಗ್ಗೆ ನಾನು ಆಶಾವಾದಿ"೧೩ ಎಂದು ಒಂದು ಕಡೆ ಹೇಳುತ್ತಾರೆ.

ನಿರಂಜನ ಕೃತಿಗಳಲ್ಲಿ ಕಾಣುವ relevance ಮತ್ತು ಆಶಾವಾದಕ್ಕೆ ಅವರ ಚಾರಿತ್ರಿಕ ಪ್ರಜ್ಞೆ ಕಾರಣ. ಇತಿಹಾಸದ ಬೆಳವಣಿಗೆಯ ವಿವಿಧ ಹಂತಗಳಲ್ಲಿ ತಾವು ಎಲ್ಲಿದ್ದೇವೆ ಎಂಬ ಅರಿವು ಅವರ ಕೃತಿಗೆ ಅಧಿಕೃತತೆಗಳಿಸಿ ಕೊಡುವುದರ ಜೊತೆಗೆ ಮುನ್ನೋಟವೂ ಸಾಧ್ಯವಾಗುತ್ತದೆ.

"ಸಮಕಾಲೀನರಿಂದ ಉಪೇಕ್ಷೆಗೆ ಗುರಿಯಾಗುವ ಕಲಾಕೃತಿ ಮುಂದಿನ ಪೀಳಿಗೆಯವರ ಆದರಕ್ಕೆ ಪಾತ್ರವಾಗಬಹುದು"೧೪ ಎಂಬ ನಿರಂಜನರ ಮಾತು ಇಷ್ಟು ಬೇಗ ನಿಜವಾದದ್ದು ಸೋಜಿಗದ ವಿಷಯವೇ ಸರಿ. (ತಮ್ಮ ಕಾಲದಲ್ಲಿ ಅವಗಣನೆಗೆ ಒಳಗಾಗಿದ್ದ ನಿರಂಜನ ಇಂದು ಹೆಚ್ಚು ಚರ್ಚೆಗೆ ಒಳಗಾಗಿದ್ದಾರೆ. ಗೌರವಕ್ಕೆ ಪಾತ್ರರಾಗಿದ್ದಾರೆ) ಚರಿತ್ರೆಯ ಭಾಗವಾಗಿ

ಯೋಚಿಸುವ ನಿರಂಜನರಿಗೆ ಈ ರೀತಿ ಮುಂಗಾಣ್ಕೆ ಸಾಧ್ಯವಾಯಿತೆ ?

* * * *

ಕೃತಿಯ ಅಪಯಶಸ್ಸಿಗೆ ಪ್ರಗತಿಶೀಲ ಧೋರಣೆಯಾಗಲೀ ಅದು ಹೊರಡಿಸಿರುವ ಘೋಷಣೆಯಾಗಲಿ ಮತ್ತು ಅಂತಹ ದೃಷ್ಟಿಕೋನವಾಗಲಿ ಕಾರಣ ಅಲ್ಲ ಎಂಬುದಕ್ಕೆ ನಿರಂಜನರನ್ನು ಕುರಿತ ಅಧ್ಯಯನವೇ ಸಾಕ್ಷಿಯಾಗುತ್ತದೆ.

ಕೀರ್ತಿನಾಥ ಕುರ್ತುಕೋಟಿಯವರು ಪ್ರಗತಿಶೀಲರ ಬಗ್ಗೆ ಬರೆಯುತ್ತ "ವಾದ, ವಾದವಾಗಿಯೇ ಉಳಿಯಿತೇ ಹೊರತು ನಿಜವಾದ ಸಂಗತಿಯಾಗಿರಲಿಲ್ಲ. ಅನುಭವವನ್ನು ಬಿಟ್ಟು ದೃಷ್ಟಿಕೋನವನ್ನಷ್ಟೇ ಅವಲಂಬಿಸಿದರೆ ಇಲ್ಲದ ಗೊಂದಲಕ್ಕೆ ಆಸ್ಪದ"೧೭ ಎನ್ನುತ್ತಾರೆ. ಆದರೆ ಅನುಭವ ಎಂಬ ಪದದ ವ್ಯಾಖ್ಯೆ ಅಸ್ಪಷ್ಟವಾಗಿದೆ. ಅನುಭವ ಎಂದರೆ ಕೃತಿಕಾರ ಬಂದಿರುವ ವರ್ಗದ ಹಿನ್ನೆಲೆಯ ಅನುಭವವೆ? ಕೃತಿಯನ್ನು ಸ್ವೀಕರಿಸುವ ಓದುಗನ ವರ್ಗ ಹಿನ್ನೆಲೆಯ ಅನುಭವವೇ ? ಅಥವಾ ಕೃತಿಯ ವಸ್ತುವಾಗಿರುವ ಜನತೆಯ ಅನುಭವವೇ ? ಎಂಬ ಬಗ್ಗೆ ಸ್ಪಷ್ಟ ವಿವರಣೆಇಲ್ಲ. ಜತೆಗೆ ದೃಷ್ಟಿಕೋನವನ್ನು ಅಮುಖ್ಯ ಮಾಡುವ ಧ್ವನಿ ಇಲ್ಲಿದೆ. ಕುರ್ತುಕೋಟಿಯವರು ಮುಂದುವರಿದು "ಇನ್ನೊಂದು ವಾದಕ್ಕೆ ಮಾರಿಕೊಟ್ಟು"೧೮ ಎಂದು ಹೇಳುವಲ್ಲಿ ಪೂರ್ವಗ್ರಹ ಪೀಡಿತರಾಗಿದ್ದಾರೆ ಎಂದು ಹೇಳದೆ ಗತ್ಯಂತರವಿಲ್ಲ ಯಾಕೆಂದರೆ ಶೋಷಿತರನ್ನು (ಶೋಷಕನೊಂದಿಗೆ) ಚಿತ್ರಿಸುವುದೆಂದರೆ ಕಡ ತಂದದ್ದಲ್ಲ, ಅದು ನಮ್ಮ ಸಮಾಜದಲ್ಲೇ ಇರುವಂತಹದ್ದು ಅಲ್ಲವೇ ?

ಪ್ರಗತಿಶೀಲ ಧೋರಣೆ ಬಗ್ಗೆ ಇಷ್ಟೊಂದು ಕಟುವಾಗುವ ಕುರ್ತುಕೋಟಿ. ಮಾಸ್ತಿ ಅವರ ಕಾದಂಬರಿ ಬಗ್ಗೆ ವಿಶೇಷವಾದ ರಿಯಾಯಿತಿ ನೀಡಿ ಬಿಡುತ್ತಾರೆ. ಮಾಸ್ತಿ ಅವರು ತಮ್ಮ ಮುಂದೆ ಲಭ್ಯವಿದ್ದ ಇತಿಹಾಸದ ಸಾಕ್ಷ್ಯಾಧಾರಗಳನ್ನು ಕೈ ಬಿಟ್ಟು ಕೃತಿ ರಚಿಸಿದಾಗಲೂ ಕುರ್ತುಕೋಟಿ ಮತ್ತು ಶೇಷಗಿರಿರಾವ್ ಅವರು ಮಾಸ್ತಿಯವರನ್ನು ಶ್ರೇಷ್ಠ ಐತಿಹಾಸಿಕ ಕಾದಂಬರಿಕಾರರೆಂದು ಗುರುತಿಸುತ್ತಾರೆ. ಇತಿಹಾಸದ ಬಗ್ಗೆ ಸೀಮಿತ ದೃಷ್ಟಿ ಹೊಂದಿದ್ದ

ತ.ರಾ.ಸು. ಅವರ ಐತಿಹಾಸಿಕ ಕಾದಂಬರಿಗಳ ವರ್ಣನೆ, ವಾತಾವರಣ, ಪಾತ್ರ ಸೃಷ್ಟಿಗಳಲ್ಲಿ ವೀರಜೀವನದ ರಕ್ತ ಹರಿದಿದೆಯೆಂದು ತೇಲಿಸಿ ಹೇಳಿಬಿಡುತ್ತಾರೆ.

ಆದರೆ ಸಾಮ್ರಾಜ್ಯವಾದದ ವಿರೋಧದ ಮಟ್ಟಿಗಾದರೂ ನಿರಂಜನರ "ಸ್ವಾಮಿ ಅಪರಂಪಾರ", "ಕಲ್ಯಾಣ ಸ್ವಾಮಿ" ಮಹತ್ವದ ಐತಿಹಾಸಿಕ ಕಾದಂಬರಿಗಳೆಂಬ ಕಡೆಗೆ ಈ ಹಿರಿಯ ವಿಮರ್ಶಕರು ಯಾಕೆ ಗಮನ ಸೆಳೆಯುವುದಿಲ್ಲ? ಬಹುಶಃ ಈ ವಿಮರ್ಶಕರಿಗೆ ಒಪ್ಪಿತವಾಗದ ನಿರಂಜನರ ವೈಚಾರಿಕ ಧೋರಣೆಯೇ ಕಾರಣವಿರಬೇಕು.

ನಿರಂಜನರು ತಮ್ಮ ಕಾಲದಲ್ಲಿ ಜನಪ್ರಿಯವಲ್ಲದ ಜಾಡು ಹಿಡಿದರು. ಅದನ್ನೇ ಪಟ್ಟು ಹಿಡಿದು ಸಾಧಿಸಿದರು. ಶೋಷಕ-ಶೋಷಿತರ ಚಿತ್ರಣದಲ್ಲಿ ಪಾತ್ರಗಳು ಕಪ್ಪು ಬಿಳುಪಿನಂತೆ ಸರಳೀಕರಣಗೊಳ್ಳುತ್ತವೆ ಎಂಬ ವಿತಂಡವಾದಕ್ಕೆ ಅವರು ಧೃತಿಗೆಡಲಿಲ್ಲ. ಅವರ ಕಾದಂಬರಿಯ ಪಾತ್ರಗಳು ಶೋಷಣೆಯ ಬಗ್ಗೆ ಮಾತನಾಡಿದ್ದರಿಂದ ಘೋಷಣೆಗಳನ್ನು ಆಲಂಗಿಸಿ ಕೊಂಡದ್ದರಿಂದ ಸರಳೀಕರಣಗೊಳ್ಳಲಿಲ್ಲ, ಹಲವು ಪ್ರಗತಿಶೀಲರಲ್ಲಿ ಪಾತ್ರಗಳು ಸರಳೀಕರಣಗೊಂಡದ್ದು ಬಹುಶಃ ಘೋಷಣೆಗಳಿಂದಾಗಲೀ ನಿರ್ದಿಷ್ಟ ಧೋರಣೆಯಿಂದಾಗಲೀ ಅಲ್ಲ. ಆದರೆ ಮೇಲ್ಪದರದ ಗ್ರಹಿಕೆಯಿಂದ "ದೀನ ದಲಿತರು ಬಾಹ್ಯವರ್ತನೆಯ ಹಂತದಲ್ಲಿ ಪರಿಚಿರಿತರಾಗಿದ್ದರೇ ವಿನಾ ತಮ್ಮ ಸಮಸ್ತ ಚಾರಿತ್ರಿಕ, ಸಾಮಾಜಿಕ ವಾಸ್ತವತೆಯಲ್ಲಿ ಅಲ್ಲ"[೧೯] ಎಂಬುದು ಸತ್ಯಕ್ಕೆ ಸಮೀಪವಾದ ಮಾತು.

ಪ್ರಗತಿಶೀಲ ಆಶಯ ಇಂದಿನ ಬಂಡಾಯ ಸಾಹಿತ್ಯ ಚಳುವಳಿಯಲ್ಲಿ ಮುಂದುವರಿಯಿತಲ್ಲದೆ, ಜಾತಿ, ಅಸ್ಪೃಶ್ಯತೆಯಂತಹ ಸಮಸ್ಯೆಗಳ ಶೋಧ ನೆಯೂ ಸಾಹಿತ್ಯಕ್ಕೆ ಒದಗಿ ಬಂದು ಹೆಚ್ಚಿನ ಆಯಾಮಗಳನ್ನು ಪಡೆಯಿತು. ಪ್ರಗತಿಶೀಲರು ಕೈಬಿಟ್ಟದ್ದನ್ನು ಬಂಡಾಯ ಕೈಗೆತ್ತಿಕೊಂಡಿದ್ದರಿಂದ ಅದರ ಹರಹು ವಿಸ್ತಾರವಾಯಿತು.

ಸಮಾಜ ಬದಲಾವಣೆಗೆ ಪೂರಕ ಸಾಹಿತ್ಯ ಎಂಬ ಪ್ರಗತಿಶೀಲ ಧೋರಣೆ ಯನ್ನು ಆ ಚಳುವಳಿಯ ಮುಂಚೂಣಿಯಲ್ಲಿದ್ದ ನಾಯಕರು ಅರ್ಧಕ್ಕೆ ಕೈಬಿಟ್ಟು ಪರಿಷ್ಕರಣವಾದದತ್ತ ವಾಲಿದರು. ಆದರೆ "ಬದ್ಧ" ಲೇಖಕ

ನಿರಂಜನರು ತಾವು ನಂಬಿದ್ದ ಸಾಹಿತ್ಯಕ ಮೌಲ್ಯಗಳಿಗೆ ಕೊನೆವರೆಗೂ ನಿಷ್ಠರಾಗೇ ಉಳಿದರು. ಈ ಕಾರಣಕ್ಕೇ ತಮ್ಮ ಕಾಲದಲ್ಲಿ ಉಪೇಕ್ಷೆಗೂ ಒಳಗಾದರು. ಇಂತಹ ಸ್ಥಿತಿಯೊಂದು ವಿಮರ್ಶೆ ಪಾರ್ಶ್ವವಾಯು ಪೀಡಿತವಾದದ್ದನ್ನು ಹೇಳುತ್ತದೆ. ನಿಜಕ್ಕೂ ಪಾರ್ಶ್ವವಾಯು ರೋಗದಿಂದ ಬಳಲಿದವರು ನಿರಂಜನರಲ್ಲ; ವಿಮರ್ಶಾಲೋಕ. (ನಿರಂಜನರು ತಮ್ಮ ಮಧ್ಯವಯಸ್ಸಿನಿಂದ ಸಾಯುವವರೆಗೂ ಪಾರ್ಶ್ವವಾಯು ರೋಗದಿಂದ ಬಳಲಿದರು)

ಸಾಮಾಜಿಕ ಪ್ರಜ್ಞೆಯು ಮಾತ್ರ ಇದ್ದರೆ ಸಾಕು. ಅಂತಹವರ ಕೃತಿಗಳನ್ನು ಗುಮಾನಿಯಿಂದ ನೋಡುವ ಪರಿಪಾಠ ನವ್ಯರ ಕಾಲದಲ್ಲೂ ಇತ್ತು. ಅಂತಹ ಸಂದರ್ಭದಲ್ಲೇ (೧೯೭೦ರ ದಶಕ) ಸಾಮಾಜಿಕ, ರಾಜಕೀಯ ಪ್ರಜ್ಞೆಯ ಅಗತ್ಯವನ್ನು ಗಟ್ಟಿಯಾಗಿ ಪ್ರತಿಪಾದಿಸುತ್ತ ಬಂದ ಬರಗೂರರು ತಮ್ಮ ವಿಚಾರಗಳನ್ನು "ಸಾಹಿತ್ಯ ಮತ್ತು ರಾಜಕಾರಣ" (೧೯೮೧)ದಲ್ಲಿ ದಾಖಲಿಸಿದರು. ಸಾಹಿತ್ಯದಲ್ಲಿ ಹೊಸ ದಿಕ್ಕನ್ನು ಅರಸುವ ಈ ವಿಮರ್ಶಾ ಕೃತಿಯ ಬಗ್ಗೆ ನವ್ಯ ವಿಮರ್ಶಕರು ತಾಳಿದ ಜಾಣ ಕುರುಡು ಹೊಸ ಸವಾಲುಗಳನ್ನು ಸ್ವೀಕರಿಸಲು ಸಿದ್ಧರಿಲ್ಲದ ಮನಸ್ಥಿತಿಯನ್ನು ಬಿಂಬಿಸಿತು.

ವಿಮರ್ಶಕನಿಗೆ ತನ್ನದೇ ಆದ ಧೋರಣೆಯೊಂದಿರುತ್ತದೆ. ಅದೇ ಕಣ್ಣಿನಿಂದ ಆತ ಕೃತಿಯನ್ನು ಪರಿಶೀಲಿಸುತ್ತಾನೆ. ತನ್ನ ಅಭಿಪ್ರಾಯಕ್ಕೆ ವಿರುದ್ಧವಾದ ವಾದಗಳನ್ನು ಕೃತಿ ಮಂಡಿಸಿದ್ದರೆ ಅವನ್ನು ಆತ ಗಮನಾರ್ಹ ಎಂದು ಪರಿಗಣಿಸುವುದಿಲ್ಲ ! ಯಥಾಸ್ಥಿತಿವಾದವನ್ನು ನೆಚ್ಚಿಕೊಂಡಿರುವ ವಿಮರ್ಶಕ ಚಲನಶೀಲತೆಗೆ ಒಲಿಯುವುದಿಲ್ಲ. ನವ್ಯರು ತಾವು ಹೇಳಿಕೊಂಡು ಬಂದ "ವಸ್ತು ನಿಷ್ಠತೆ" ಮತ್ತು "ನಿಷ್ಪಕ್ಷಪಾತ" ತನಕ್ಕೆ ತಾವೇ ಎರವಾದದ್ದು ಒಂದು ವಿಪರ್ಯಾಸ.

ಪ್ರತಿಯೊಂದು ಹೊಸ ಸಾಹಿತ್ಯ ಪರಂಪರೆಯೂ ಹೊಸ ವಿಮರ್ಶಾ ಮಾನದಂಡಗಳನ್ನು ಬಯಸುವುದು ಈ ಕಾರಣಕ್ಕೆ ಇರಬೇಕು. ಇದು ಅನಿವಾರ್ಯ ಕೂಡ.

ಪ್ರಗತಿಶೀಲ ಧೋರಣೆ ವಿಶೇಷ ಆಯಾಮಗಳನ್ನು ಪಡೆದು ಬಂಡಾಯ ಸಾಹಿತ್ಯ ಸಂಘಟನೆ ಹುಟ್ಟಿಕೊಂಡಾಗಿನಿಂದ ಇಲ್ಲೀವರೆಗೂ ಪ್ರಗತಿಪರ ದೃಷ್ಟಿಕೋನದ ವಿಪುಲ ಸಾಹಿತ್ಯವೇ ಸೃಷ್ಟಿಯಾಗಿದೆ. ಇಂದಿನ ಸಾಹಿತ್ಯ ಸಂದರ್ಭದ ಪ್ರಮುಖವಾಹಿನಿ 'ಬಂಡಾಯ'ವೇ ಆಗಿದ್ದು. ಅನೇಕ ಹಿರಿ-ಕಿರಿಯ ಲೇಖಕರೂ ಸಂಘಟನೆಯೊಳಗೆ ಗುರುತಿಸಿಕೊಂಡಿದ್ದಾರೆ. ನಾನೊಬ್ಬ 'ಕಮಿಟೆಡ್ ಲೇಖಕ' ಎಂದೂ ಅವರು ಅನೇಕ ಸಂದರ್ಭಗಳಲ್ಲಿ ಸಾರಿದ್ದಾರೆ.

ಉದಾಹರಣೆಗೆಂದು ಒಂದೆರಡು ಹೆಸರು ಹೇಳುವುದಾದರೆ ಡಾ|| ಬೆಸಗರಹಳ್ಳಿ, ಬೊಳುವಾರು, ಕುಂ.ವೀ., ಬರಗೂರು, ದೇವನೂರು ಮುಂತಾದವರು ತಮ್ಮ ಧೋರಣೆಗಳನ್ನು ಘೋಷಿಸಿಕೊಂಡು, ಸಂಘಟನೆಗಳಲ್ಲಿ ಕ್ರಿಯಾಶೀಲರಾಗಿದ್ದೂ ಕೂಡ ಇವರ ಕತೆಗಳಲ್ಲಿ ಸಂಕೀರ್ಣ ಪಾತ್ರಗಳು ಮೂಡಿಬಂದಿವೆ. ಇನ್ನು ಸಮರ್ಥವಾಗಿ ಬರೆಯುತ್ತಿರುವ ಯುವ ಜನರ ಪಡೆಯೆ ಸಮಕಾಲೀನದಲ್ಲಿ ನಮ್ಮ ಕಣ್ಣೆದುರಿಗಿದೆ. ಒಬ್ಬ ಲೇಖಕ ಕಮಿಟೆಡ್ ಆದಕೂಡಲೇ ಪಾತ್ರಗಳು "ಕಪ್ಪು-ಬಿಳುಪು"ಗಳಾಗಿ ಸರಳೀಕರಣಗೊಳ್ಳಬೇಕಾಗಿಲ್ಲ.

ನನ್ನ ಈ ಟಿಪ್ಪಣಿಯಲ್ಲಿ ಪುನರಾವರ್ತನೆಯಾದರೂ ಈ ಕೆಳಗಿನ ಮಾತುಗಳನ್ನು ಚರ್ಚೆಗಾಗಿ ಎತ್ತಿಕೊಳ್ಳಬಯಸುತ್ತೇನೆ.

ಮೊದಲನೆಯದಾಗಿ, ಪ್ರಗತಿಶೀಲರ ಕೃತಿಗಳಲ್ಲಿ ಪಾತ್ರಗಳು ಕಪ್ಪು-ಬಿಳುಪುಗಳಾಗಿ ಸರಳೀಕರಣಗೊಳ್ಳುತ್ತವೆ ಎಂದು ಮಾಡಲಾದ ಆರೋಪದ ಹಿಂದೆ ಪ್ರಗತಿಶೀಲ ಮನೋಧರ್ಮವನ್ನೇ ನಿರಾಕರಿಸುವ ಮನಸ್ಥಿತಿ ಇದೆಯಲ್ಲವೆ ?

ಎರಡನೆಯದಾಗಿ, ಇಂತಹ ಪ್ರತಿಗಾಮಿ ನಿಲುವು ಇಂದು ಇನ್ನೊಂದು ರೀತಿಯ ಹೇಳಿಕೆಯಾಗಿ ಸ್ವಲ್ಪಮಟ್ಟಿನ ಚಲಾವಣೆ ಪಡೆಯುತ್ತಿವೆ. ಅದೆಂದರೆ : "ಸಾಹಿತ್ಯದಲ್ಲಿ ಜನಪರತೆ ಬೇಕು ಎಂಬ ಚಳುವಳಿಗಳು ಯಾಕೆ ಬೇಕು ? ಎಲ್ಲ ಸಾಹಿತ್ಯವೂ ಜನಪರವೇ" ಎಂಬುದು ಕೆಲವರ ಪ್ರಶ್ನೆ-ವಾದ.

ಎಲ್ಲ ಸಾಹಿತ್ಯವೂ ಜನಪರ ಆಗಿರಲು ಹೇಗೆ ಸಾಧ್ಯ ? ಕಥೆ, ಕಾವ್ಯದಲ್ಲಿ ಪರೋಕ್ಷವಾಗಿಯೋ, ಪ್ರತ್ಯಕ್ಷವಾಗಿಯೋ ಕರ್ಮಸಿದ್ಧಾಂತವನ್ನು ಪ್ರತಿ

ಪಾದಿಸಿ ಆತನನ್ನು ನಿಷ್ಕ್ರಿಯವಾಗಿ ಮಾಡುವ ಸಾಹಿತ್ಯ ಜನಪರವಾಗಲು ಹೇಗೆ ಸಾಧ್ಯ ?

ಇಂತಹ ಸರಳ ಪ್ರಶ್ನೆಗಳಿಗೇ ಮೇಲಿನ ಈ ಹೇಳಿಕೆ ಬಿದ್ದುಹೋಗುತ್ತದೆ.

ಸಾಹಿತ್ಯದಲ್ಲಿ ಪ್ರಗತಿಶೀಲತೆ ನಿರಂತರವಾಗಿ ಇರಬೇಕಾದರೆ ಅದಕ್ಕೆ ಸಂಬಂಧಿಸಿದ ಚರ್ಚೆ, ವಿಷಯ ಮಂಡನೆ, ಚಳುವಳಿಗಳೂ ಇರಲೇಬೇಕಲ್ಲವೆ? ನಿರಂಜನರ ಕುರಿತ ಅಧ್ಯಯನವೇ ಇಂತಹ ವಿಷಯಗಳ ಮೇಲೆ ಸಾಕಷ್ಟು ಬೆಳಕು ಚೆಲ್ಲುತ್ತದೆ ಎಂಬುದು ಒಂದು ಆಶಾದಾಯಕ ಸಂಗತಿ.

## ಅಡಿಟಿಪ್ಪಣಿಗಳು

೧. ಡಾ॥ ಎಂ.ಎಂ. ಕಲ್ಬುರ್ಗಿ-೧೯೯೦—"ಕನ್ನಡ ಸಾಹಿತ್ಯ ಸಂದರ್ಭ" ಪುಟ. ೨೨-೨೩.
೨. ಅದೇ
೩. ಅದೇ
೪. ಎಸ್. ಅನಂತನಾರಾಯಣ-೧೯೮೯—"ಸಾಹಿತ್ಯ ಮತ್ತು ಸಾಮಾಜಿಕ ನಿಲುವುಗಳು" ಪುಟ. ೭೨.
೫. ಬಸವರಾಜ ಕಟ್ಟೀಮನಿ-೧೯೮೧—"ಕಾದಂಬರಿಕಾರನ ಕಥೆ", ಪುಟ. ೨೧೫-೨೧೬.
೬. ಸಿ. ವೀರಣ್ಣ—'ಪ್ರತಿಭಟನಾ ಕಾವ್ಯ'ದ ಮುನ್ನುಡಿ.
೭. ಚಿ. ಶ್ರೀನಿವಾಸರಾಜು-೧೯೯೦—"ಕನ್ನಡ ಸಾಹಿತ್ಯ ಸಂದರ್ಭ" ಪುಟ. ೫೯-೬೦.
೮. ಜಿ. ಎಸ್. ಆಮೂರ-೧೯೭೦—"ಕೃತಿ ಪರೀಕ್ಷೆ"
೯. ಅದೇ
೧೦. ನರಹಳ್ಳಿ ಬಾಲಸುಬ್ರಮಣ್ಯ-೧೯೯೦—"ಕನ್ನಡ ಸಾಹಿತ್ಯ ಸಂದರ್ಭ" ಪುಟ. ೭.
೧೧. ನಿರಂಜನ ವಾಚಿಕೆ-೧೯೮೮—"ಪ್ರತಿಧ್ವನಿ".
೧೨. ಅಶೋಕ ಶೆಟ್ಟರ-೧೯೯೧—'ಸಂಕ್ರಮಣ-೨೨೮", ಪುಟ. ೩೦.
೧೩. ನಿರಂಜನ ವಾಚಿಕೆ-೧೯೮೭—"ಪ್ರತಿಧ್ವನಿ"
೧೪. ಸಂಕ್ರಮಣ-೧೯೯೧-೨೨೮, ಪುಟ. ೨೭
೧೫. ನಿರಂಜನ ವಾಚಿಕೆ-"ಪ್ರತಿಧ್ವನಿ"

೧೬. ಅದೇ

೧೭. ಕೀರ್ತಿನಾಥ ಕುರ್ತಕೋಟಿ-೧೯೫೦—ಪ್ರಗತಿಶೀಲತೆ (ಎಚ್. ಎಸ್. ರಾಘವೇಂದ್ರರಾವ್ ಪುಸ್ತಕದಿಂದ)

೧೮. ಅದೇ

೧೯. ಅದೇ

## ಗ್ರಂಥ ಋಣ


೧. ಬುದ್ಧಿ ಭಾವ ಬದುಕು—ನಿರಂಜನ.

೨. ಮುಖಿತಃ—ನಿರಂಜನ.

೩. ಸಾಹಿತ್ಯ ಮತ್ತು ರಾಜಕಾರಣ—ಬರಗೂರು ರಾಮಚಂದ್ರಪ್ಪ

೪. ಬಂಡಾಯ ಸಾಹಿತ್ಯ ಮೀಮಾಂಸೆ—ಬರಗೂರು ರಾಮಚಂದ್ರಪ್ಪ

೫. ಅನ್ವೇಷಣೆ—ಸಂಚಿಕೆಗಳು (ಸಂ : ಆರ್. ಜಿ. ಹಳ್ಳಿ ನಾಗರಾಜ)

೬. ಸಂಕ್ರಮಣ—ಸಂಚಿಕೆಗಳು (ಸಂ : ಚಂದ್ರಶೇಖರ ಪಾಟೀಲ)

೭. ಪ್ರಗತಿ ಪಂಥ (೧೯೭೬) ದಾಖಲೆಗಳು

೮. ಪ್ರಗತಿಶೀಲ ಸಾಹಿತ್ಯ—ಸಂ : ಅ.ನ.ಕೃ.

೯. ಭಾರತ ಶಕ್ತಿ—ಸಂ : ಕುಮಾರ ವೆಂಕಣ್ಣ

೧೦. ವಿಮರ್ಶಾ ತತ್ವಗಳು ಮತ್ತು ಪ್ರಾಯೋಗಿಕ ವಿಮರ್ಶೆ ಸಂ : ವಿ. ಕೃ. ಗೋಕಾಕ್

೧೧. ಕನ್ನಡ ಸಾಹಿತ್ಯ ಮತ್ತು ಪ್ರತಿಭಟನೆ (ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಕಟಣೆ)

೧೨. ಸಾಹಿತ್ಯದಲ್ಲಿ ಪ್ರಗತಿ (೧೯೪೪)—ವಿ. ಕೃ. ಗೋಕಾಕ್

೧೩. ಹೊಸಗನ್ನಡ ಸಾಹಿತ್ಯ (೧೯೭೫)—ಎಲ್. ಎಸ್. ಶೇಷಗಿರಿರಾವ್

೧೪. ಮಾರ್ಕ್ಸ್‌ವಾದ ಮತ್ತು ಕಾವ್ಯ—ಜಾರ್ಜ್ ಥಾಮ್ಸನ್

೧೫. Illusion and Reality—Christopher Caudwell

# ನಿರಂಜನರ ಕಾದಂಬರಿಗಳಲ್ಲಿ ಬಿಡುಗಡೆಯ ಹೋರಾಟಗಳ ಅಭಿವ್ಯಕ್ತಿ

---

—ಸಿದ್ದನಗೌಡ ಪಾಟೀಲ

ಬಿಡುಗಡೆಯ ಹೋರಾಟಗಳು ಎಂಬ ವಿಷಯ ಹಲವಾರು ಆಯಾಮಗಳನ್ನು ಹೊಂದಿದೆ. ಸಾಮಾನ್ಯವಾಗಿ ಸ್ವಾತಂತ್ರ್ಯ ಚಳುವಳಿಗಳಿಗೆ 'ಬಿಡುಗಡೆಯ ಹೋರಾಟ'ಗಳೆಂದು ಕರೆಯುವದು ರೂಢಿ. ಆದರೆ 'ಬಿಡುಗಡೆ' ಎನ್ನುವ ಪರಿಕಲ್ಪನೆ ವಿಶಾಲಾರ್ಥವನ್ನು ಹೊಂದಿದೆ. ಸಾಮ್ರಾಜ್ಯಶಾಹಿ ವಿರೋಧಿ ಹೋರಾಟ, ಒಂದು ಸ್ಥಗಿತ ಸಾಮಾಜಿಕ ವ್ಯವಸ್ಥೆಯ ಬಿಗಿತದಿಂದ ಚಲನಶೀಲ ಸಮಾಜದತ್ತ ನಡೆಯುವಾಗಿನ ಸಂಘರ್ಷ, ಸ್ಥಾಪಿತ ಸಮಾಜ ವ್ಯವಸ್ಥೆಯ ಮೌಲ್ಯಗಳ ಮೌಢ್ಯತೆಯಿಂದ ಮುಕ್ತಗೊಳ್ಳಲು ನಡೆವ ಹೋರಾಟ, ಅಜ್ಞಾನ ಮತ್ತು ವಿಜ್ಞಾನದ ನಡುವಿನ ಹೋರಾಟ, ಶೋಷಕ ವರ್ಗ ಸೃಷ್ಟಿಸಿದ ಸಂಕೋಲೆಗಳನ್ನು ಹರಿದೊಗೆಯಲು ಶೋಷಿತ ವರ್ಗ ನಡೆಸುವ ಸಂಘರ್ಷ, ವರ್ಣವ್ಯವಸ್ಥೆಯ ಸಮಾಜದಲ್ಲಿ ವರ್ಣರಹಿತ ಸಮಾಜಕ್ಕಾಗಿ ನಡೆವ ಹೋರಾಟ, ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಸಮಾನ ಬದುಕಿಗಾಗಿ ಸ್ತ್ರೀ ನಡೆಸುವ ಹೋರಾಟ, ಧಾರ್ಮಿಕ ಮೂಢನಂಬಿಕೆ ಹಾಗೂ ಪುರೋಹಿತಶಾಹಿಯ ವಿರುದ್ಧದ ಪ್ರತಿಭಟನೆ–ಇವೆಲ್ಲ ಬಿಡುಗಡೆಯ ಹೋರಾಟಗಳೇ ಆಗುತ್ತವೆ. ಈ ಎಲ್ಲ ಹೋರಾಟಗಳು ಸಂಘಟಿತ–ಅಸಂಘಟಿತ. ನೇರ–ಪರೋಕ್ಷ, ಮೂರ್ತ–ಅಮೂರ್ತ, ಮಾನಸಿಕ–ವೈಚಾರಿಕ ಹೀಗೆ ಯಾವ ರೀತಿಯಲ್ಲಾದರೂ ವ್ಯಕ್ತಗೊಳ್ಳಬಹುದು. ನಿರಂಜನರ ಸುಮಾರು ಇಪ್ಪತ್ತೈದು ಕಾದಂಬರಿಗಳಲ್ಲಿ ಇಂಥ ಹಲವಾರು ಹೋರಾಟಗಳು ವಿವಿಧ ರೀತಿಯಲ್ಲಿ

ಅಭಿವ್ಯಕ್ತಗೊಂಡಿವೆ. ಈ ಎಲ್ಲ ಕಾದಂಬರಿಗಳನ್ನೂ ವಿಶ್ಲೇಷಿಸುವುದು ಈ ವಿಚಾರ ಸಂಕಿರಣದ ಪರಿಮಿತಿಯಲ್ಲಿ ಸಾಧ್ಯವಾಗದು. ಆದರೂ ಸಂಘಟಿತ ಹೋರಾಟಗಳ ವಸ್ತುವನ್ನೊಳಗೊಂಡ ಕಾದಂಬರಿಗಳಾದ ವಿಮೋಚನೆ, ಚಿರಸ್ಮರಣೆ, ಮೃತ್ಯುಂಜಯ. ಕಲ್ಯಾಣಸ್ವಾಮಿ. ಸ್ವಾಮಿ ಅಪರಂಪಾರ–ಕೃತಿಗಳನ್ನು ಪ್ರಾತಿನಿಧಿಕವಾಗಿ ಗಮನಿಸಬಹುದು.

ನಿರಂಜನರ ಕೃತಿಗಳ ವಿಶ್ಲೇಷಣೆಗಿಂತ ಮೊದಲು ಕೃತಿಕಾರನ ಬದುಕಿನ ಹಿನ್ನೆಲೆಯತ್ತ ಸ್ವಲ್ಪ ಗಮನಹರಿಸುವುದು ಅಗತ್ಯ. ಯಾಕೆಂದರೆ ನಿರಂಜನರ ಕಾದಂಬರಿಗಳು ಕೇವಲ ಒಂದು ಘಟನೆಯ ಸುತ್ತ ಹೆಣೆದ ಭ್ರಮಾತ್ಮಕ ಕಸೂತಿಗಳಲ್ಲ. ಒಂದಿಲ್ಲಾ ಒಂದು ರೀತಿಯಲ್ಲಿ ನಿರಂಜನರ ಆತ್ಮಕಥೆ ಅಥವಾ ಒಂದು ಕಾಲ ಘಟ್ಟದಲ್ಲಿ ನಡೆದ ಐತಿಹಾಸಿಕ ಘಟನೆಗಳು. ನಿರಂಜನರ ಹುಟ್ಟು ಸಹಿತ ಒಂದು ಬಿಡುಗಡೆಯ ಹೋರಾಟವೇ. ಎಂಟನೇ ವಯಸ್ಸಿನಲ್ಲಿ ವಿಧವೆಯಾದ ಚಿನ್ನಮ್ಮ ವಿಧವೆಗೆ ಸಮಾಜ ಹೇರಿದ ನಿರ್ಬಂಧಗಳನ್ನು ಪ್ರತಿಭಟಿಸಿ ತನ್ನ ಮೂವತ್ತನೇ ವಯಸ್ಸಿನಲ್ಲಿ ತಾಯ್ತನ ಪಡೆದುದರ ಪರಿಣಾಮವೇ ೧೯೨೪ರಲ್ಲಿ ಕುಳಕುಂದದಲ್ಲಿ ಶಿವರಾಯ (ನಿರಂಜನ)ನ ಜನನವಾಗಿದ್ದು. ಚಿನ್ನಮ್ಮ ಸಮಾಜ ವಿಧವೆಗೆ ಹಾಕಿದ ಲಕ್ಷ್ಮಣರೇಖೆಯನ್ನು ದಾಟದೇ ಇದ್ದರೆ ಇಂದು ಕನ್ನಡ ಸಾಹಿತ್ಯದಲ್ಲಿ ಕೆಂಪು ಗುಲಾಬಿಯಂತೆ ಕಂಗೊಳಿಸುವ ನಿರಂಜನ ಭೂಮಿಗೇ ಬರುತ್ತಿರಲಿಲ್ಲ. ನಿರಂಜನ ಹುಟ್ಟಿನಿಂದಲೇ ಹೋರಾಟ ಆರಂಭಿಸಿದವರು. ವಿಧವೆಯ ಸಂತಾನವನ್ನೊಪ್ಪದ ಸಮಾಜದ ಕಟು ನೀತಿಯಿಂದಾಗಿ ಕುಳಕುಂದ ಬಿಟ್ಟು ಕಾವು ಗ್ರಾಮಕ್ಕೆ ತಾಯಿ-ಮಗನ ಪಯಣ, ಅಲ್ಲಿ ಪಂಚಾಯತಿ ವಿಚಾರಣೆಗೆ ಗುರಿ, ಮಾನವೀಯ ವ್ಯಕ್ತಿಗಳಿಂದ ರಕ್ಷಣೆ ಹೀಗೆ ಸಾಮಾಜಿಕವಾಗಿ ನೆಲೆಗೊಂಡರೂ ಬಡತನ ಚಿನ್ನಮ್ಮ ಮತ್ತು ಶಿವರಾಯನನ್ನು ಬಿಡಲಿಲ್ಲ. ಶಿವರಾಯ ಶಾಲೆ ಕಲಿಯುವುದರ ಜೊತೆಗೇ ಬೀಡಿ ಕಟ್ಟುವುದು, ಕಾಫೀ ಮಾರಾಟ. ಬೀಡಾ ಮಾರಾಟ ಹೀಗೆ ಶ್ರಮಜೀವಿಯಾಗೇ ಬೆಳೆದ. ಈ ರೀತಿ ಸಾಮಾಜಿಕವಾಗಿ, ಆರ್ಥಿಕವಾಗಿ ಬಾಲ್ಯದಿಂದಲೇ ತುಳಿತಕ್ಕೊಳಪಟ್ಟ ಈ ಬಾಲಕ ಸಹಜವಾಗಿಯೇ ಪ್ರತಿಭಟನೆ, ಸ್ವಾಭಿಮಾನ ಮತ್ತು ಜೀವನ ಮೌಲ್ಯಗಳನ್ನು ಮೈಗೂಡಿಸಿಕೊಂಡು ಬೆಳೆದವನು. ೧೯೪೦ರಲ್ಲಿ ಗಾಂಧಿ ಮತ್ತು ನೆಹರು ಈ ದಿನಗಳಲ್ಲಿ ಸ್ವಾತಂತ್ರ್ಯ ಚಳುವಳಿಯ ಬಿಸಿಯು

ಮೊಳೆತವು. ಗಾಂಧೀವಾದಿಯಾದ. ಸಾಹಿತ್ಯ ಪ್ರಿಯನಾದ ಶಿವರಾಯ ತನ್ನ ಹದಿಮೂರನೇ ವಯಸ್ಸಿನಲ್ಲಿಯೇ ಕಥೆ ಬರೆಯಲು ಆರಂಭಿಸಿದ. ಮೊದಲ ಕಥೆ ಕಡಂಗೋಡ್ಲು ಶಂಕರಭಟ್ಟರ 'ರಾಷ್ಟ್ರ ಬಂಧು' ಪತ್ರಿಕೆಯಲ್ಲಿ ಪ್ರಕಟವೂ ಆಯಿತು. ಆಗಲೇ ಶಿವರಾಯ ಸಾಹಿತಿ, ಜನಪರ ಚಿಂತಕ, ಸ್ವಾತಂತ್ರ್ಯ ಹೋರಾಟಗಾರ ಹೀಗೆ ಬಹುಮುಖ ವ್ಯಕ್ತಿಯಾಗಿ ಬೆಳೆದದ್ದು. ಕಾಂಗ್ರೆಸ್ ಕಾರ್ಯಕ್ರಮ, ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ ಶಿವರಾಯ ೧೯೪೧ರಲ್ಲಿ ಎಸ್.ಎಸ್.ಎಲ್.ಸಿ.ಯಲ್ಲಿ ಪ್ರಥಮ ದರ್ಜೆಯಲ್ಲಿ ತೇರ್ಗಡೆ ಯಾದರೂ 'ಬ್ರಿಟಿಷರು ಕೊಡುವ ಹಂಗಿನ ಪ್ರಮಾಣ ಪತ್ರ ಬೇಡ' ಎಂದು ಪ್ರಮಾಣಪತ್ರ ನಿರಾಕರಿಸುವದರ ಮೂಲಕ ತನ್ನ ಪ್ರಥಮ ಸಾಮ್ರಾಜ್ಯಶಾಹಿ ವಿರೋಧಿ ಹೋರಾಟ ಆರಂಭಿಸಿದ.

ಸ್ವಾತಂತ್ರ್ಯ ಸಂಗ್ರಾಮದ ಜೊತೆಯಲ್ಲಿಯೇ ನಡೆದ ರೈತ ಚಳುವಳಿ ಗಳ ಪರಿಣಾಮದಿಂದ ೧೯೩೬ ರಲ್ಲಿ ಅಖಿಲ ಭಾರತ ಕಿಸಾನ ಸಭಾ ಹುಟ್ಟಿ ಕೊಂಡಿತು. ಚಿತ್ತಗಾಂಗ್ ಚಳುವಳಿ, ಪುನ್ನಪ್ರವಯಲಾರ್ ಚಳುವಳಿ, ತೆಲಂಗಾಣ ರೈತ ಚಳುವಳಿಗಳಂಥ ದೇಶವೇ ನೆನಪಿಡುವ ಇನ್ನೊಂದು ಚಳು ವಳಿ ಕಯ್ಯೂರು ರೈತರ ಹೋರಾಟ. ೧೯೩೭ ರಿಂದ ರೈತರ ಸಂಘಟನೆ, ಜಮಿನ್ದಾರಿ ಹಾಗೂ ಸಾಮ್ರಾಜ್ಯಶಾಹಿ ವಿರೋಧಿಯಾಗಿ ನಡೆದ ಈ ಚಳುವಳಿ ೧೯೪೩ ಮಾರ್ಚ್ ೨೯ ರಂದು ನಾಲ್ವರು ರೈತನಾಯಕರ ಗಲ್ಲು ಶಿಕ್ಷೆಯಾಗುವ ವರೆಗೆ ನಿರಂತರವಾಗಿ ನಡೆಯಿತು. ಈ ಸಂದರ್ಭದಲ್ಲಿ ಶಿವರಾಯ (ನಿರಂಜನ) ಕಯ್ಯೂರಿಗೆ ಸಮೀಪದ ನೀಲೇಶ್ವರದಲ್ಲಿ ಹೈಸ್ಕೂಲ್ ವಿದ್ಯಾರ್ಥಿ. ರೈತ ಚಳುವಳಿಗಾರರಾದ ಭೂಗತ ಕಮ್ಯುನಿಷ್ಟರ ಸಂಪರ್ಕದ ಪರಿಣಾಮದದಿಂದ ಗಾಂಧಿವಾದಿಯಾಗಿದ್ದ ಶಿವರಾಯ ಮಾರ್ಕ್ಸ್‌ವಾದಿಯಾದ. ಅಂದಿನಿಂದ ಪತ್ರಕರ್ತನಾಗಿ, ಸಾಹಿತಿಯಾಗಿ, ಕಮ್ಯುನಿಷ್ಟ್ ಪಕ್ಷದ ಸದಸ್ಯನಾಗಿ, ಭೂಗತ ಹೋರಾಟಗಾರನಾಗಿ (ನಿರಂಜನನಾಗಿ) ಜೀವನದ ಕೊನೆಯ ಉಸಿರಿನವರೆಗೂ ಒಬ್ಬ ಮಾರ್ಕ್ಸ್‌ವಾದಿ ಚಿಂತಕನಾಗಿ ಬದುಕಿದ. ಇಂಥ ವೈವಿಧ್ಯಮಯ ಬದುಕಿನ ಅನುಭವಗಳನ್ನು ಹೊಂದಿದ ನಿರಂಜನ ಪ್ರಥಮ ಕಾದಂಬರಿ 'ವಿಮೋಚನೆ' (೧೯೫೩) ಯಿಂದ ಕೊನೆಯ ಕಾದಂಬರಿ 'ಮೃತ್ಯುಂಜಯ (೧೯೭೬)ದ ವರೆಗಿನ ಒಟ್ಟು ಇಪ್ಪತ್ತೈದು ಕೃತಿಗಳಲ್ಲಿ ಇಡಿಯಾಗಿ ತಮ್ಮ

ಬದುಕಿನಲ್ಲಿ ಕಂಡುಂಡ ಅನುಭವಗಳನ್ನು ಎರಕ ಹೊಯ್ದಿದ್ದಾರೆ. ತಾವು ನಡೆಸಿದ ಎಲ್ಲ ರೀತಿಯ ಹೋರಾಟಗಳ ಅನುಭವ, ನಂಬಿದ ಸಿದ್ಧಾಂತ ಎಲ್ಲದರ ಪ್ರತಿರೂಪ ಅವರ ಕಾದಂಬರಿಗಳು. ಅವರ ಲೇಖನಿ, ಬುದ್ಧಿ, ಭಾವ, ಬದುಕು, ಹೋರಾಟ, ಚಿಂತನೆ ಎಲ್ಲ ವಾಸ್ತವದ ಪ್ರತಿರೂಪ. ಅಂತೆಯೇ ಅವರ ಕಾದಂಬರಿಗಳು ಒಂದು ರೀತಿಯಲ್ಲಿ ಅವರ ಆತ್ಮಕಥೆ, ಅವರು ಬದುಕಿನಲ್ಲಿ ನಡೆಸಿದ ಹೋರಾಟಗಳ ಅಭಿವ್ಯಕ್ತಿ. ಅವರ ಸಾಮಾಜಿಕ ಕಾದಂಬರಿಯೇ ಇರಲಿ, ಐತಿಹಾಸಿಕ ಕಾದಂಬರಿಯೇ ಇರಲಿ ಮನುಷ್ಯ, ಬದುಕು ಅವುಗಳ ಕೇಂದ್ರ ಬಿಂದು. ಇಡಿಯಾಗಿ ಮನುಷ್ಯನ ಹೋರಾಟದ ಅಭಿವ್ಯಕ್ತಿಯೇ ಅವರ ಕಾದಂಬರಿಗಳ ಕಥಾವಸ್ತು.

ಈ ವಿಚಾರ ಸಂಕಿರಣದಲ್ಲಿ ನಾನು ಆಯ್ದುಕೊಂಡ ಐದು ಪ್ರಾತಿನಿಧಿಕ ಕಾದಂಬರಿಗಳಲ್ಲಿ ನಾಲ್ಕು ಐತಿಹಾಸಿಕ ಘಟನೆಗಳ ಕಥಾವಸ್ತುವನ್ನು ಹೊಂದಿದ ಕೃತಿಗಳು. ಅವುಗಳಲ್ಲಿ 'ಚಿರಸ್ಮರಣೆ' ಮತ್ತು 'ಮೃತ್ಯುಂಜಯ' ಈ ಎರಡು ಕೃತಿಗಳ ಹಾಗೂ 'ಕಲ್ಯಾಣ ಸ್ವಾಮಿ' ಮತ್ತು 'ಸ್ವಾಮಿ ಅಪರಂಪಾರ' ಕೃತಿಗಳ ಕಥಾವಸ್ತುವಿನ ನೆಲೆ ಭಿನ್ನವಾದದ್ದು. ನಿರಂಜನರ ಪ್ರಥಮ ಕಾದಂಬರಿ 'ವಿಮೋಚನೆ' (೧೯೫೩). ವರ್ಗಸಮಾಜದ ಕ್ರೂರತನದ ಅಡಿಯಲ್ಲಿ ಹುಟ್ಟಿನಿಂದ ಸಾವಿನವರೆಗೂ ಬದುಕಿಗಾಗಿ ಪರಿತಪಿಸುವ ಕಥಾನಾಯಕ ಚಂದ್ರಶೇಖರನ ಆತ್ಮಚರಿತ್ರೆ ಈ ಕಾದಂಬರಿಯ ಕಥಾವಸ್ತು. ಬಾಲ್ಯದಲ್ಲಿಯೇ ಅನಾಥನಾಗುವ ಚಂದ್ರಶೇಖರ ವಿದ್ಯೆ ಕಲಿಯಲು, ಉದ್ಯೋಗ ಪಡೆಯಲು, ಪ್ರೀತಿಯನ್ನು ರಕ್ಷಿಸಿಕೊಳ್ಳಲು, ನಿಶ್ಚಿತವಾದ ಬದುಕು ನಡೆಸಲು ಮಾಡುವ ಎಲ್ಲಾ ಪ್ರಯತ್ನಗಳೂ ವಿಫಲವಾಗಿ ಕೊನೆಗೆ ಶ್ರೀಮಂತ ಸ್ನೇಹಿತನ ಉಪ್ಪಿನ ಋಣ ತೀರಿಸಲು ಅವನು ಮಾಡಿದ ಕೊಲೆಯ ಅಪರಾಧವನ್ನು ತಾನೇ ಹೊತ್ತು ನೇಣುಗಂಬವೇರುತ್ತಾನೆ. ಭಾರತದ ಸ್ವಾತಂತ್ರ್ಯ ದಿನವಾದ ೧೯೪೭ ಆಗಸ್ಟ್ ೧೫ರ ಪೂರ್ವ ಹಾಗೂ ನಂತರದ ದಿನಗಳು ಈ ಕಾದಂಬರಿಯ ಕಥಾ ಸಂದರ್ಭ. ಕಥಾನಾಯಕ ಚಂದ್ರಶೇಖರ ಬದುಕಿದಲ್ಲಿ ಎಲ್ಲೂ ನೆಲೆಸಿಗದೆ ಕಳ್ಳತನ ಮಾಡಿಕೊಂಡು ಇರುವಾಗ ಅವನ ಬಾಲ್ಯ ಸ್ನೇಹಿತ ಶ್ರೀಕಂಠ ಸಿಗುತ್ತಾನೆ. ಕಾರ್ಖಾನೆಯೊಂದರ ಮಾಲೀಕನಾದ ಶ್ರೀಕಂಠ ಚಂದ್ರುನನ್ನು ತನ್ನ ಮ್ಯಾನೇಜರ್‌ನನ್ನಾಗಿ ನೇಮಿಸಿಕೊಳ್ಳುತ್ತಾನೆ. ಈ ಸಂದರ್ಭದಲ್ಲಿ ಕಾರ್ಖಾನೆ

ಯಲ್ಲಿ ನಡೆಯುವ ಕಾರ್ಮಿಕರ ಸಂಘಟನೆ ಮತ್ತು ಹೋರಾಟಗಳನ್ನು ಮಾಲೀಕ ವರ್ಗದ ದಬ್ಬಾಳಿಕೆಯನ್ನು ಚಿತ್ರಿಸುವುದರ ಮೂಲಕ ದುಡಿಯುವ ಜನರ ಹೋರಾಟದ ಆಶಯವನ್ನು ಕಾದಂಬರಿಕಾರ ವ್ಯಕ್ತಪಡಿಸುತ್ತಾನೆ. ಇಲ್ಲಿ ಕಾರ್ಮಿಕರ ಕೆಲವು ಬೇಡಿಕೆಗಳಿಗಾಗಿ ಹೋರಾಟ ನಡೆದರೂ ಈ ಹೋರಾಟಗಳೇ ಅಂತಿಮಗುರಿ ಅಲ್ಲ. ಒಟ್ಟು ಹೊಸ ಸಮಾಜದ ನಿರ್ಮಾಣ, ವರ್ಗ ವ್ಯವಸ್ಥೆಯಿಂದ ಬಿಡುಗಡೆಗಾಗಿ ನಡೆಸುವ ಹೋರಾಟವೇ ಆ ಸಂಘಟನೆಯ ಉದ್ದೇಶ ಎಂಬುದನ್ನು ಕೆಲವು ಘಟನೆಗಳ ಮೂಲಕ ಸ್ಪಷ್ಟಪಡಿಸುತ್ತಾರೆ. ಶ್ರೀಕಂಠ ಕಾರ್ಮಿಕರ ಚಳುವಳಿಯನ್ನು ಸದೆಬಡಿದ ನಂತರ ಚೇತನಾ ಎಂಬ ಕಾರ್ಮಿಕರಪರವಾದ ಪತ್ರಿಕೆಯಲ್ಲಿ ಒಂದು ಕಥೆ ಪ್ರಕಟವಾಗುತ್ತದೆ. (ಈ ಕಥೆ 'ಸೋಲಿನ ಬಳಿಕ' ಎಂಬ ನಿರಂಜನರ ಒಂದು ಬಿಡಿಕಥೆಯ ಒಂದು ಭಾಗ) ಆ ಕಥೆಯಲ್ಲಿ ಒಂದು ಪಾತ್ರ ಹೇಳುವ ಮಾತುಗಳು ಹೀಗಿವೆ: "ಇಂಗೇ ಇರೋಕಾತದ ? ಗಿಡಾ ಕಡದ್ರೆ ತಿರ್‌ಗಾ ಚಿಗರ್ತೈತೆ. ಮರಾ ಕಡಿದ್ರೆ ಬುಡ ಚಿಗರ್ಕೋತದೆ. ಹೆಂಡ್ತಿ ಬಸಿರು ಕಳದೋದ್ರೆ ಮತ್ತೆ ಮಗಾ ಆಗಾಕಿಲ್ವಾ ? ... .. ಅಂಗೇ ಕಣ್ರಪ್ಪೋ ಮಳೆ ಬತ್ತದೆ. ಬರಾಕಿಲ್ಲಾ ಅನ್ಕೋಕಾದಾತಾ ? ಬತ್ತದೆ ಕಣ್ರಪ್ಪೋ ಬಂದೇ ಬತ್ತದೆ" ಈ ಮಾತುಗಳು ಕೆಲವು ಹೋರಾಟಗಳ ತಾತ್ಕಾಲಿಕ ವಿಫಲತೆಯ ನಂತರವೂ ನಿತ್ಯ ನಡೆಯಬೇಕಾದ ಹೋರಾಟಗಳ ಸೂಚನೆಯನ್ನು ಮತ್ತು ಒಂದು ವರ್ಗ ಸಮಾಜದಲ್ಲಿ ಹೋರಾಟಗಳ ಅನಿವಾರ್ಯತೆಯನ್ನು ಒತ್ತಿ ಹೇಳುತ್ತವೆ.

'ವಿಮೋಚನೆ' ಕಾದಂಬರಿಯಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವೆಂದರೆ; ಭಾರತಕ್ಕೆ ಬಂದ ಸ್ವಾತಂತ್ರ್ಯ ಸಾಮಾನ್ಯ ಜನತೆಯ ಯಾವುದೇ ಮೂಲಭೂತ ಹಿತಗಳನ್ನು ಪೂರೈಸದೇ ಸ್ವಾತಂತ್ರ್ಯ ನಂತರವೂ ಮೇಲ್ವರ್ಗ ಭಾರತೀಯ ಸಮಾಜದ ಸೂತ್ರಗಳನ್ನು ಹಿಡಿದು ಜನತೆಯ ಶೋಷಣೆಯನ್ನು ನಿರಂತರವಾಗಿ ಮುಂದುವರೆಸಿತು ಎಂಬ ಅಭಿಪ್ರಾಯ. ಸ್ವಾತಂತ್ರ್ಯಪೂರ್ವದಲ್ಲಿಯೂ ಸ್ವಾತಂತ್ರ್ಯ ದೊರೆತ ನಂತರವೂ ದುಡಿಯುವ ಜನತೆ ಪೋಲೀಸರಿಂದ ಹೊಡೆತ ತಿನ್ನುವುದು ಒಂದು ಸಾಮಾನ್ಯ ಸಂಗತಿಯಾಗಿ ಈ ಕಾದಂಬರಿಯಲ್ಲಿ ಮೂಡಿಬರುತ್ತದೆ. ಪ್ರತಿಯಾಗಿ ಸ್ವಾತಂತ್ರ್ಯ ದೊರಕಿದ ನಂತರ ಶ್ರೀಕಂಠನ ಹೆಂಡತಿ ಶಾರದೆ ಕಾಂಗ್ರೆಸ್ ನಾಯಕಿಯಾಗುವ ತಯಾರಿ ವಿಡಂಬನೆ

ರೂಪದಲ್ಲಿ ವ್ಯಕ್ತವಾಗುತ್ತದೆ. ಸ್ವತಂತ್ರ್ಯದಂಥ ಮಹತ್ವದ ದಿನ ಹಸಿವಿನಿಂದ ಸಾಯುವ ಜನರಿಗೆ ಎಲ್ಲ ದಿನಗಳಂತೆ ಒಂದು ಸಾಮಾನ್ಯ ದಿನವಾಗಿ ಕಳೆದು ಹೋಗುವ ಹಾಗೆ ಚಿತ್ರಿಸಿದ್ದು ಸ್ವಾತಂತ್ರ್ಯ ಕುರಿತ ನಿರಂಜನರ ಅಭಿಪ್ರಾಯವನ್ನು ಸೂಚಿಸುತ್ತದೆ. ಈ ಕಾದಂಬರಿ ಕಥಾನಾಯಕ ಚಂದ್ರಶೇಖರ ವ್ಯವಸ್ಥೆಯ ಪರಿಣಾಮದಿಂದುಂಟಾದ ದಾರಿದ್ರ್ಯ ಮತ್ತು ಅನಾಥತೆಯಿಂದ ಬಿಡುಗಡೆ ಪಡೆಯಲು ವ್ಯಕ್ತಿಗತ ನೆಲೆಯಲ್ಲಿ ನಡೆಸುವ ವಿಫಲ ಹೋರಾಟವನ್ನೊಂದು ಕಡೆ. ಇನ್ನೊಂದು ಕಡೆ ಕಾರ್ಮಿಕ ವರ್ಗ ಬಂಡವಾಳಶಾಹಿ ವರ್ಗದ ಶೋಷಣೆಯ ಚಕ್ರದಿಂದ ಬಿಡುಗಡೆ ಹೊಂದಲು ನಡೆಸುವ ಹೋರಾಟಗಳನ್ನೊಳಗೊಂಡಿದೆ.

ನಿರಂಜನರ ಮಹತ್ವದ ಕಾದಂಬರಿಗಳೆಂದು ಗುರುತಿಸಲ್ಪಡುವ 'ಚಿರಸ್ಮರಣೆ' ಮತ್ತು 'ಮೃತ್ಯುಂಜಯ' ಸ್ಪಷ್ಟವಾದ ಬಿಡುಗಡೆಯ ಹೋರಾಟದ ಕಥಾವಸ್ತುವನ್ನು ಹೊಂದಿದ ಕೃತಿಗಳು. ಚಿರಸ್ಮರಣೆ ಈ ಮೊದಲೇ ಹೇಳಿದ ಕಯ್ಯೂರು ರೈತ ಹೋರಾಟದ ಅಂತಸ್ಸತ್ವವನ್ನು ಕಲಾತ್ಮಕವಾಗಿ ಸೆರೆಹಿಡಿದ ಕಾದಂಬರಿ. ಈ ಕುರಿತು ನಿರಂಜನರೇ ಈ ಕೃತಿಯ ಮುನ್ನುಡಿಯಲ್ಲಿ ಹೀಗೆ ಹೇಳುತ್ತಾರೆ : "ನಾನು ಬರೆದುದು ಕಯ್ಯೂರು ರೈತರ ಹೋರಾಟದ ವರದಿಯಲ್ಲ. ಆ ವರದಿ ಕೇರಳದ ರೈತ ಜಾಗೃತಿಯ ಇತಿಹಾಸದ ಒಂದು ಭಾಗ. .......ನಾನು ಮಾಡಿದ್ದು ಕಯ್ಯೂರಿನ ಹೋರಾಟದ ಅಂತಸ್ಸತ್ವವನ್ನು – ಚೇತನವನ್ನು – ಕಲೆಯಲ್ಲಿ ಸೆರೆಹಿಡಿಯುವ ಯತ್ನ." ಈ ಯತ್ನದ ಹಿಂದೆ ಕೇವಲ ಒಂದು ಸಂಘಟನೆಯ ಹೋರಾಟ ಮೇಲ್ನೋಟಕ್ಕೆ ಕಾದಂಬರಿಯಲ್ಲಿ ಕಂಡರೂ ೧೯೩೦ ರಿಂದ ೧೯೪೭ರ ವರೆಗಿನ ಸುಮಾರು ಎರಡು ದಶಕದ ಸಂಘರ್ಷದಲ್ಲಿ ಭಾರತೀಯ ಜನತೆ ನಡೆಸಿದ ತೀವ್ರತರ ಬಿಡುಗಡೆಯ ಹೋರಾಟದ ಚಿತ್ರಣ ಅಡಕವಾಗಿದೆ. ಈ ಹೋರಾಟ ಸಾಮ್ರಾಜ್ಯಶಾಹಿಯ ದಾಸ್ಯಕ್ಕೆದುರಾಗಿ ಸ್ವಾತಂತ್ರ್ಯಕ್ಕಾಗಿ ನಡೆದ ಬಿಡುಗಡೆಯ ಹೋರಾಟ ಮಾತ್ರವಲ್ಲ. ಸಾಮ್ರಾಜ್ಯಶಾಹಿಗೆ ಅಧೀನರಾಗಿದ್ದ ಭಾರತೀಯ ಜಮೀನ್ದಾರರ ವಿರುದ್ಧದ ಹೋರಾಟವೂ ಹಾಗೂ ಏಕಕಾಲದಲ್ಲಿ ಸಾಮ್ರಾಜ್ಯಶಾಹಿ ಸಂಸ್ಕೃತಿ ಮತ್ತು ಊಳಿಗಮಾನ್ಯ ಸಂಸ್ಕೃತಿಗಳ ವಿರುದ್ಧದ ಹೋರಾಟವೂ ಆಗಿದೆ. ಈ ಬಿಡುಗಡೆಯ ಹೋರಾಟದ ಉದ್ದೇಶ ಸಾಮ್ರಾಜ್ಯಶಾಹಿ ಹಾಗೂ

ಊಳಿಗಮಾನ್ಯ ವ್ಯವಸ್ಥೆಯ ಆರ್ಥಿಕ–ಸಾಮಾಜಿಕ–ಸಾಂಸ್ಕೃತಿಕ ಶೋಷಣೆಗಳಿಂದ ಬಿಡುಗಡೆ ಹೊಂದಿ ಒಂದು ಹೊಸ ಮೌಲ್ಯದ ಸಮಾಜ ಸ್ಥಾಪನೆ. ಈ ಹೋರಾಟದ ಸಂದರ್ಭದಲ್ಲಿನ ಅಂತಸ್ಸತ್ವ ಮತ್ತು ಚೇತನಗಳ ಕಲಾತ್ಮಕ ರೂಪ "ಚಿರಸ್ಮರಣೆ'.

೧೯೩೬ ರಿಂದ ದೇಶಾದ್ಯಂತ ಆರಂಭವಾದ ಏಕರೂಪದ ಸಂಘಟಿತ ರೈತ ಚಳುವಳಿ ೧೯೩೭ ರಲ್ಲಿ ಕೇರಳದ ಮಲಬಾರ್ ಪ್ರಾಂತದಲ್ಲಿಯೂ ಆರಂಭವಾದಾಗ ಕಾಸರಗೋಡು, ನೀಲೇಶ್ವರ, ಚಿರುಕ್ಕಲ್, ಕರಿವೆಳ್ಳೂರು, ಕಯ್ಯೂರು ಈ ಎಲ್ಲ ಕಡೆ ರೈತ ಜಾಗೃತಿ, ಆಂದೋಲನ ಆರಂಭವಾದವು. ಕಯ್ಯೂರು ಅಂಥ ಜಾಗೃತಿಯ ಒಂದು ಮೂರ್ತರೂಪ. 'ಚಿರಸ್ಮರಣೆ' ಈ ಹೋರಾಟದ ಕಲಾತ್ಮಕ ರೂಪ. ಸಂಘಟನೆ, ಚಳುವಳಿ ಯಾವುದರ ಸೋಂಕೂ ಇಲ್ಲದ, ಶೋಷಕರ ದರ್ಪದ ಧ್ವನಿ ಶೋಷಿತರ ನರಳಾಟಗಳು ಮಾತ್ರ ಜೀವಂತವಿದ್ದ ಹಳ್ಳಿ ಕಯ್ಯೂರು. ಆ ಹಳ್ಳಿಗೆ ಬಂದ ಮಾಸ್ತರ ತನ್ನ ಶಿಷ್ಯರಾದ ಅಪ್ಪು, ಚಿರಕುಂಡರ ಮೂಲಕ ಇಡೀ ಹಳ್ಳಿಯನ್ನು ಜಾಗೃತಗೊಳಿಸಿ ರೈತ ಚಳುವಳಿ ನಡೆಸುವ ಯತ್ನ ಈ ಕಾದಂಬರಿಯ ಮೊದಲ ಭಾಗ. ಕೊನೆಗೆ ಜಮೀನ್ದಾರರ ಪಿತೂರಿ ಹಾಗೂ ಬ್ರಿಟೀಷರ ದಬ್ಬಾಳಿಕೆ, ರೈತ ನಾಯಕರ ಗಲ್ಲು ಶಿಕ್ಷೆ ಇವು ಕಾದಂಬರಿಯ ಅಂತಿಮ ಭಾಗ. ನಂಬಿಯಾರ ಮತ್ತು ನಂಬೂದಿರಿಗಳ ಜಮೀನ್ದಾರಿಕೆಯ ದಬ್ಬಾಳಿಕೆ ಹಾಗೂ ಬ್ರಿಟೀಷ್ ಸರಕಾರದ ಒತ್ತಾಯದ ಕಂದಾಯ ವಸೂಲಿ ಈ ಎರಡೂ ರೀತಿಯ ಶೋಷಣೆಯ ವಿರುದ್ಧ ನಡೆದ ಹೋರಾಟದ ವಿವರಗಳನ್ನು 'ಚಿರಸ್ಮರಣೆ' ಕಾದಂಬರಿ ಇಡಿಯಾಗಿ ಒಳಗೊಂಡಿದ್ದರೂ ಒಂದೆರಡು ಘಟನೆಗಳ ವಿವರಣೆಯ ಮೂಲಕ ಹೋರಾಟದ ತಾತ್ವಿಕ ನೆಲೆಯನ್ನು ಸ್ಪಷ್ಟಪಡಿಸಬಹುದು. ರೈತ ಚಳುವಳಿ ಜಾಗೃತವಾದಾಗ ಕಯ್ಯೂರಿನ ಜಮೀನ್ದಾರನಾದ ನಂಬಿಯಾರ ಬ್ರಿಟೀಷ್ ಸರಕಾರದ ಪೋಲೀಸ್ ಅಧಿಕಾರಿಯೊಬ್ಬನಿಗೆ ಹೀಗೆ ಹೇಳುತ್ತಾನೆ : "ಮೊಳಕೇಲೆ ಚಿವುಟದಿದ್ದರೆ ಮರವಾದ್ಮೇಲೆ ಕಷ್ಟ. ಇವರ ಒಗ್ಗಟ್ಟಿನಿಂದಾಗಿ ನಮಗಿನ್ನು ಇವರು ಯಾವ ರೀತಿಯ ಸಹಾಯವನ್ನೂ ಮಾಡೋದಿಲ್ಲ. ನಮ್ಮ ಸಾಲ ವಸೂಲಾಗೋದೇ ಕಷ್ಟವಾಗ್ತದೆ. ಗೇಣಿ ಸಂದಾಯವೂ ನಿಂತು ಹೋಗಬಹುದು. ಗೌರವ ಮರ್ಯಾದೆ ಯಾವುದೂ ಸಿಗದೆ ನಾವು

ಊರು ಬಿಡಬೇಕಾಗುತ್ತದೆ ಅಷ್ಟೇ.....ಪ್ಲಾಂ ಇದು ನಮಗೆ ಸಂಬಂಧಿಸಿದ್ದು ಮಾತ್ರವಲ್ಲ ಇವರೆಲ್ಲ ಸರಕಾರದ ಮಾತನ್ನೂ ಆಡ್ತಾರೆ. ಸಾಮ್ರಾಜ್ಯಶಾಹಿಯನ್ನು ನಿರ್ನಾಮ ಮಾಡ್ತೇವಂತ ಪ್ರತಿಜ್ಞೆ ಮಾಡಿದಾರಂತೆ........ನನ್ನ ಕೇಳಿದರೆ ಈ ರೈತ ಸಂಘದ ಮೇಲೆಯೇ ನಿಷೇದಾಜ್ಞೆ ಹೊರಿಸಬೇಕು ಏನ್ಹೇಳ್ತೀರಾ ?” ಈ ಮಾತುಗಳು ಭಾರತೀಯ ಜಮೀನ್ದಾರರ ಹಾಗೂ ಬ್ರಿಟೀಷ್ ಸಾಮ್ರಾಜ್ಯಶಾಹಿಗಳ ಸಖ್ಯ ಮತ್ತು ಜನತೆಯ ಶೋಷಣೆಗೆ ಇಬ್ಬರೂ ಸೇರಿ ನಡೆಸುವ ಪಿತೂರಿಗಳನ್ನು ಸ್ಪಷ್ಟಪಡಿಸುತ್ತವೆ. ಇದಕ್ಕೆ ಪ್ರತಿಯಾಗಿ ಕಯ್ಯೂರಿನ ರೈತರು ಮತ್ತು ಕೂಲಿಕಾರರು ನಡೆಸುವ ಹೋರಾಟದ ಮೆರವಣಿಗೆಯಲ್ಲಿ ಹೇಳುವ—“ಭೂಮಿ ಯಾರದು ? –ರೈತನದು ! ಉಳುವವನೇ – ಹೊಲದೊಡೆಯ ! ಹಳೆಯ ಸಾಲ – ಮನ್ನಾ ಮಾಡಿ ! ಜಮೀನ್ದಾರಿ ಪದ್ಧತಿ – ಅಳಿಸಿ ಹೋಗಲಿ ! ಸಾಮ್ರಾಜ್ಯಶಾಹಿ ನಾಶವಾಗಲಿ !” ಎಂಬ ಘೋಷಣೆಗಳು ಹೋರಾಟದ ಉದ್ದೇಶ ಮತ್ತು ಗುರಿಯನ್ನು ಸ್ಪಷ್ಟಪಡಿಸುತ್ತವೆ. ಕಯ್ಯೂರು ರೈತ ಹೋರಾಟದ ಸಂದರ್ಭದಲ್ಲಿ ಸುಬ್ಬರಾಯ ಎಂಬ ಪೋಲೀಸ್ ಕಾನ್‌ಸ್ಟೇಬಲ್‌ನ ಆಕಸ್ಮಿಕ ಸಾವು ಇಡೀ ಚಳುವಳಿಯನ್ನು ಹತ್ತಿಕ್ಕಲು ಕಾರಣವಾಗುತ್ತದೆ. ಸರಕಾರ ಅಪ್ಪು, ಚಿರಕುಂಡ, ಕುಞಂಬು, ಅಬೂಬಕ್ಕರ್ ಎಂಬ ನಾಲ್ಕು ರೈತ ನಾಯಕರಿಗೆ ಮರಣ ದಂಡನೆಯ ಶಿಕ್ಷೆ ವಿಧಿಸುವುದರ ಮೂಲಕ ಕಯ್ಯೂರು ರೈತ ಹೋರಾಟದ ಒಂದು ಅಧ್ಯಾಯ ಮುಕ್ತಾಯವಾಗುತ್ತದೆ. ಇಂಥ ಒಂದು ಗಮನಾರ್ಹ ಹೋರಾಟವನ್ನು ಫ್ಲ್ಯಾಶ್‌ಬ್ಯಾಕ್ ತಂತ್ರದ ಮೂಲಕ ಈ ಕಾದಂಬರಿ ವ್ಯಕ್ತಪಡಿಸುತ್ತದೆ. ಕೆಲವು ಪಾತ್ರಗಳು ನೇರವಾಗಿ ಇನ್ನು ಕೆಲವು ಕಾಲ್ಪನಿಕವಾಗಿ ರೂಪಗೊಂಡು ಇತಿಹಾಸದಲ್ಲಿ ನಡೆದ ವಾಸ್ತವ ಹೋರಾಟವೊಂದರ ಕಲಾತ್ಮಕ ಅಭಿವ್ಯಕ್ತಿಯಾಗಿ ಈ ಕಾದಂಬರಿಯಲ್ಲಿ ಮೂಡಿಬಂದಿದೆ.

“A Greek tradition reports a great revolt in Egypt in which the Slaves Captured a Province” ಎಂಬ ಗ್ರೀಕ್ ಇತಿಹಾಸ ವಿವರಣೆಯ ಸಂದರ್ಭದ ಒಂದು ವಾಕ್ಯದ ಆಧಾರದ ಮೇಲೆ ನಾಲ್ಕುವರೆ ಸಾವಿರ ವರ್ಷಗಳ ಹಿಂದೆ ಈಜಿಪ್ಟ್ ನಾಗರಿಕತೆಯ

ಇತಿಹಾಸದಲ್ಲಾದ ಗುಲಾಮ ಬಂಡಾಯದ ಸುತ್ತ ಹೆಣೆದ ಕಥಾವಸ್ತು 'ಮೃತ್ಯುಂಜಯ' ಕಾದಂಬರಿ. ಆ ಕಾಲದ ಈಜಿಪ್ಟ್ ನಾಗರಿಕತೆ ಹಿಂದಿನ ಸಂಸ್ಕೃತಿ, ಆಚಾರ, ಆಡಳಿತ ಪದ್ಧತಿ, ಸಾಮಾಜಿಕ-ಆರ್ಥಿಕ ವ್ಯವಸ್ಥೆ, ಭೌಗೋಳಿಕ ಪರಿಸರ ಇಂಥ ಎಲ್ಲ ವಿಷಯಗಳ ಕುರಿತು ನಿರಂಜನರು ನಡೆಸಿದ ಆಳವಾದ ಅಧ್ಯಯನ ಈ ಕೃತಿಯ ಮೂಲ ಆಕರ. ಈಜಿಪ್ಟ್‌ನಲ್ಲಿ ಗುಲಾಮರ ಮತ್ತು ಗುಲಾಮರೊಡೆಯರ ನಡುವೆ ನಡೆದ ಹಲವಾರು ಹೋರಾಟಗಳ, ಬಂಡಾಯಗಳ ಪ್ರಾತಿನಿಧಿಕ ಘಟನೆಯಾಗಿ ಈ ಕಾದಂಬರಿಯಲ್ಲಿ ವ್ಯಕ್ತವಾದ ಸಂದರ್ಭವನ್ನು ಗಮನಿಸಬಹುದು.

ಐಗುಪ್ತ ದೇಶದ ನೀರಾನೆ ಪ್ರಾಂತದ ರೈತರು, ಕೂಲಿಕಾರರು, ಕುಶಲ ಕರ್ಮಿಗಳು ಅರಸೊತ್ತಿಗೆ ತಮ್ಮ ಮೇಲೆ ಹೇರಿದ್ದ ಭಾರವಾದ ಕಂದಾಯ ವಸೂಲಿಯ ವಿರುದ್ಧ ನಡೆಸುವ ಹೋರಾಟ, ಪ್ರತಿಯಾಗಿ ಪ್ರಭುತ್ವದ ಅಧಿಕಾರಿಗಳು ನಡೆಸುವ ದಬ್ಬಾಳಿಕೆ, ಮೆನೆಪ್ಟಾ ಎಂಬ ರೈತನ ನಾಯಕತ್ವ ದಲ್ಲಿ ಒಂದುಗೂಡಿದ ಶೋಷಿತ ಜನತೆ ಫೆರೋನ ಕಂದಾಯಾಧಿಕಾರಿ ಹಾಗೂ ಪ್ರಾಂತಪಾಲನನ್ನು ಹೊಡೆದೋಡಿಸಿ ಸಮಾನತೆಯ ಆಧಾರದ ಮೇಲೆ ಪ್ರಜಾಸತ್ತಾತ್ಮಕ ರೀತಿಯಲ್ಲಿ ಸ್ವಯಂ ಆಡಳಿತ ನಡೆಸುವುದು — ಈ ಕಾದಂಬರಿಯ ಪೂರ್ವಭಾಗದ ಕಥಾವಸ್ತು. ಶೋಷಣೆಯಿಂದ ಬಿಡುಗಡೆ ಹೊಂದಿದ ಈ ನೀರಾನೆ ಪ್ರಾಂತದ ಜನನಾಯಕ ಮೆನೆಪ್ಟಾನನ್ನು ಸಂಧಾನ ಕ್ಕೆಂದು ಫೆರೋ ಅರಸು ರಾಜಧಾನಿಗೆ ಕರೆಸುತ್ತಾನೆ. ಆದರೆ ಅಲ್ಲಿ ಮಹಾ ಅರ್ಚಕ ಪೇಪಾಟ್ ಹಾಗೂ ಫೆರೋ ಅರಸನ ನಡುವಿನ ರಾಜಕೀಯ ತಿಕ್ಕಾಟ ದಲ್ಲಿ ಮೆನೆಪ್ಟಾ ಶಿರಚ್ಛೇದನದ ಶಿಕ್ಷೆಗೆ ಬಲಿಯಾಗುತ್ತಾನೆ. ನಂತರ ಮಹಾ ಅರ್ಚಕ ಪೇಪಾಟ್‌ನ ನಾಯಕತ್ವದಲ್ಲಿ ಧರ್ಮದ ಮುಖವಾಡ ಹೊತ್ತ ಸೈನ್ಯ ನೀರಾನೆ ಪ್ರಾಂತದ ಮೇಲೆ ಧಾಳಿ ಮಾಡಿ ಅಲ್ಲಿ ನೆಲೆಸಿದ್ದ ಜನವಾದಿ ಆಡಳಿತ ವ್ಯವಸ್ಥೆಯನ್ನು ಕಿತ್ತೊಗೆದು ಮತ್ತೆ ಫೆರೋ ಅರಸನ ಆಡಳಿತ ಸ್ಥಾಪನೆ ಯಾಗುತ್ತದೆ. ಹೀಗೆ ದುಡಿಯುವ ವರ್ಗದ ಪ್ರತಿನಿಧಿಯಾದ ಮೆನೆಪ್ಟಾ ಮತ್ತು ರೈತರು, ಕೂಲಿಕಾರರು, ಕುಶಲಕರ್ಮಿಗಳು ಅರಸೊತ್ತಿಗೆಯ, ಭೂಮಾಲಿಕರ ಹಾಗೂ ಪುರೋಹಿತಶಾಹಿಯ ಶೋಷಣೆಯ ಹಿಡಿತದಿಂದ

ಬಿಡುಗಡೆ ಹೊಂದಲು ನಡೆಸಿದ ಹೋರಾಟದ ಚಿತ್ರಣ 'ಮೃತ್ಯುಂಜಯ' ಕಾದಂಬರಿಯಲ್ಲಿ ವಿವರವಾಗಿ ಮೂಡಿಬಂದಿದೆ.

'ಮೃತ್ಯುಂಜಯ' ಕಾದಂಬರಿಯಲ್ಲಿ ಬರುವ ಮೆನೆಪಟಾ ಹಾಗೂ ಅವನ ಸಂಗಡಿಗರ ಪಾತ್ರಗಳು ಶ್ರಮಿಕ ಜನತೆಯನ್ನು ಶೋಷಣೆಯಿಂದ ಮುಕ್ತಗೊಳಿಸಲು ನಿರಂತರವಾದ ಹೋರಾಟ ನಡೆಸುತ್ತವೆ. ಶೋಷಕ ವ್ಯವಸ್ಥೆಗೆ ಬದಲಾಗಿ ಒಂದು ಹೊಸ ಮಾನವತಾ ಮೌಲ್ಯದ ಸಮಾಜ ಸ್ಥಾಪನೆಗಾಗಿ ಅವರು ನಡೆಸುವ ಸಂಘರ್ಷ ಕ್ರಿಸ್ತಪೂರ್ವದ ಗುಲಾಮರ ಬಂಡಾಯದ ಹಿನ್ನೆಲೆಯಲ್ಲಿ ಮೂಡಿಬಂದರೂ ಅದು ಇತಿಹಾಸದ ಎಲ್ಲ ಕಾಲದ ದುಡಿವ ಜನತೆಯ ಹೋರಾಟದ ಮೌಲ್ಯಗಳನ್ನು ಪ್ರತಿಪಾದಿಸುತ್ತದೆ. ಫೆರೋನ ನ್ಯಾಯಸ್ಥಾನದಲ್ಲಿ ವಿಚಾರಣೆ ನಡೆದಾಗ ವರ್ಗಸಮಾಜದ ಅಮಾನವೀಯತೆಯನ್ನು ಪ್ರತಿಭಟಿಸುವ ಮೆನೆಪಟಾನ ಮಾತುಗಳು ಗಮನಾರ್ಹವಾಗಿವೆ. "… ….ಸುಲಿಗೆಗೆ ಒಪ್ಪದ ನಾವು–ದಲಿತರು ಸಿಡಿದು ನಿಂತಿದ್ದೇವೆ. ಎಲ್ಲರೂ ನೆಮ್ಮದಿಯಿಂದ ಬಾಳುವ ಹೊಸ ವ್ಯವಸ್ಥೆಯನ್ನು ರೂಪಿಸಿದ್ದೇವೆ. ಇಷ್ಟುಕಾಲ ಕುರಿಗಳಾಗಿ ಕಟುಕನ ಕತ್ತಿಗೆ ತಲೆಯೊಡ್ಡಿದ್ದು ಸಾಲದೇ ? ದೇವರ ಹೆಸರಿನಲ್ಲಿ ಅರ್ಚಕರ ಮುಷ್ಠಿಯೊಳಗೆ ಪಿಷ್ಟಿಯಾಗಿದ್ದು ಸಾಲದೆ ?" ಎಂಬ ಮೆನೆಪಟಾನ ಪ್ರಶ್ನೆಗಳು ನೇರವಾಗಿ ಶೋಷಣೆಯಿಂದ ಬಿಡುಗಡೆ ಹೊಂದಲು ಎಚ್ಚೆತ್ತ ಶೋಷಿತ ಜನತೆಯ ಹೋರಾಟದ ಉದ್ದೇಶವನ್ನು ಪ್ರತಿಪಾದಿಸುತ್ತವೆ, ಇವು ಇಂದಿಗೂ ಎಲ್ಲ ದೇಶದ ದುಡಿವ ಜನತೆಯ ಪ್ರಶ್ನೆಗಳಾಗಿ ಜೀವಪಡೆಯುತ್ತವೆ. ಮಹಾ ಅರ್ಚಕ ಹೇಪಾಟ್ ಧರ್ಮದ ಮುಖವಾಡ ಹೊತ್ತು ಸೈನ್ಯ ಸಮೇತನಾಗಿ ಬಂದು ನೀರಾನೆ ಪ್ರಾಂತವನ್ನು ಧ್ವಂಸಗೊಳಿಸಿದ ನಂತರವೂ ಆ ಹತ್ಯಾಕಾಂಡದಿಂದ ತಪ್ಪಿಸಿಕೊಂಡು ಹೋಗುವ ಮೆನೆಪಟಾನ ಪತ್ನಿ (ಗರ್ಭಿಣಿ) ನೆಫಿಸ್, ಮಗ ರಾಮೆರಿಪಟಾ, ಬಂಡಾಯಗಾರರ ಪರವಾಗಿದ್ದ ಅರ್ಚಕ ಮೆನ್ನ ಮುಂತಾದವರು ಮೆನೆಪಟಾನ ಕನಸುಗಳನ್ನು ಹೊತ್ತುಕೊಂಡೇ ಹೋಗುತ್ತಾರೆ. ಹೋರಾಟದ ಚೇತನಗಳನ್ನು ಜೀವಂತವಾಗಿಟ್ಟು ಕಾದಂಬರಿಯನ್ನು ಮುಕ್ತಾಯಗೊಳಿಸುವ ನಿರಂಜನರ ಉದ್ದೇಶ ಶೋಷಿತ ಜನತೆಯ ಬಿಡುಗಡೆಯ ಹೋರಾಟದ ಮುಂದುವರಿಕೆಯ ಸೂಚನೆಯಾಗಿದೆ.

ಬ್ರಿಟೀಷ್ ಸಾಮ್ರಾಜ್ಯಶಾಹಿಗೆದುರಾಗಿ ನಡೆದ ಕಿತ್ತೂರ ಚೆನ್ನಮ್ಮ,

ಟಿಪ್ಪು ಮುಂತಾದವರು ನಡೆಸಿದ ಹೋರಾಟಗಳಂತೆ ಕೊಡಗಿನ ಸಂಸ್ಥಾನದಲ್ಲಿ ಹತ್ತೊಂಬತ್ತನೇ ಶತಮಾನದ ಮಧ್ಯಭಾಗದಲ್ಲಿ ನಡೆದ ಹೋರಾಟವೂ ಒಂದು. ಬ್ರಿಟೀಷ್‌ರಿಂದ ಕೊಡಗಿನ ಹಾಲೇರಿ ವಂಶದ ಅರಸು ಚಿಕ್ಕವೀರ ರಾಜೇಂದ್ರನ ಪದಚ್ಯುತಿಯ ನಂತರ ಅರಸನ ದಳಪತಿ ಪುಟ್ಟಬಸವ ಕಲ್ಯಾಣಸ್ವಾಮಿಯಾಗಿ ಬ್ರಿಟೀಷರ ವಿರುದ್ಧ ಜನರನ್ನು ಸಂಘಟಿಸಿ ನಡೆಸಿದ ಹೋರಾಟದ ಕಥೆ ನಿರಂಜನರ 'ಕಲ್ಯಾಣಸ್ವಾಮಿ' (೧೯೫೬) ಕಾದಂಬರಿಯ ಕಥಾವಸ್ತು. ಚಿಕ್ಕವೀರ ರಾಜೇಂದ್ರನ ಸಹೋದರ (ದೊಡ್ಡಪ್ಪನ ಮಗ) ವೀರಪ್ಪಸ್ವಾಮಿ ಅಪರಂಪಾರನಾಗಿ ಜಂಗಮ ವೇಷದಲ್ಲಿ ಕೊಡಗು ಸಂಸ್ಥಾನದ ಸ್ವಾತಂತ್ರ್ಯಕ್ಕಾಗಿ ನಡೆಸಿದ ಪ್ರಯತ್ನ 'ಸ್ವಾಮಿ ಅಪರಂಪಾರ' (೧೯೬೨) ಕಾದಂಬರಿಯ ಕಥಾವಸ್ತು. ಈ ಎರಡೂ ಕಾದಂಬರಿಗಳು ಒಂದೇ ಕಥಾವಸ್ತುವನ್ನು ಹೊಂದಿದ್ದರೂ ಕಲ್ಯಾಣಸ್ವಾಮಿ ಸೇನೆಯನ್ನು ಸಂಘಟಿಸಿ ನಡೆಸುವ ಹೋರಾಟ, ಸ್ವಾಮಿ ಅಪರಂಪಾರ ಆಧ್ಯಾತ್ಮದ ನೆಲೆಯಿಂದ 'ಜಂಗಮರು ವೀರ ಜಂಗಮರಾಗಬೇಕು' ಎಂಬ ಘೋಷಣೆಯಿಂದ ಕೊಡಗು ಸಂಸ್ಥಾನದ ಬಿಡುಗಡೆಗೆ ನಡೆಸಿದ ಸಂಘರ್ಷ ಒಂದು ಹೋರಾಟದ ವಿವಿಧ ಮಗ್ಗುಲುಗಳನ್ನೊಳಗೊಂಡಿವೆ.

ಸಾಮಾಜಿಕ ಪ್ರಗತಿಯಲ್ಲಿ ಅರಸೊತ್ತಿಗೆಗಳ ಪುನರ್ ಸ್ಥಾಪನೆಗಾಗಿ ನಡೆದ ಹೋರಾಟಗಳು ಜನತೆಯ ಬಿಡುಗಡೆಯ ಹೋರಾಟಗಳೇ ? ಎಂಬ ಪ್ರಶ್ನೆ ನನಗಿದೆ. ಭಾರತೀಯ ಸಂದರ್ಭದಲ್ಲಿ ಸಾಮಾಜಿಕ ಪ್ರಗತಿಯ ಚಕ್ರದ ಚುಕ್ಕಾಣಿಯನ್ನು ಬ್ರಿಟೀಷರು ತಮ್ಮ ಲಾಭಕ್ಕಾಗಿ ಹಿಡಿದಿದ್ದರಿಂದ, ಜನತೆ ಪರಕೀಯರ ಆಳ್ವಿಕೆಯನ್ನು ಪ್ರತಿಭಟಿಸುವಲ್ಲಿ ಶೋಷಣೆಯ ವಿರೋಧಿ ಮನೋಭಾವವನ್ನೂ ಹೊಂದಿರುವುದರಿಂದ ಕೆಲವು ನಿರ್ದಿಷ್ಟ ಸಂದರ್ಭದಲ್ಲಿ ಅವನ್ನು ಬಿಡುಗಡೆಯ ಹೋರಾಟವೆಂದೇ ಪರಿಗಣಿಸುವದು ಅನಿವಾರ್ಯವಾಗುತ್ತದೆ. ಪ್ರಸ್ತುತ 'ಕಲ್ಯಾಣಸ್ವಾಮಿ' ಕಾದಂಬರಿಯಲ್ಲಿ ಪುಟ್ಟಬಸವ, ನಂಜಯ್ಯ, ಕರ್ತುರಕುಡಿಯ, ಚೆಟ್ಟಿಕುಡಿಯ, ಮಾಚಯ್ಯ, ರಾಮೇಗೌಡ ಮುಂತಾದ ಪಾತ್ರಗಳು ನಡೆಸುವ ಸಂಘಟನೆ, ಹೋರಾಟಗಳು ಆ ಕಾಲದ ಒಟ್ಟು ಜನತೆಯ ಮನೋಭಾವವನ್ನು ಪ್ರಾತಿನಿಧಿಕವಾಗಿ ಸೂಚಿಸುತ್ತವೆ. ಚಿಕ್ಕವೀರ ರಾಜೇಂದ್ರನ ಪದಚ್ಯುತಿಯ ನಂತರ ಕಲ್ಯಾಣಸ್ವಾಮಿ ಎಂಬ ಹೆಸರಿನಿಂದ

ಪುಟ್ಟಬಸವ ಪ್ರತ್ಯೇಕ ದಂಡುಕಟ್ಟಿ ನಡೆಸುವ ಮೊದಲ ಹೋರಾಟ ಬ್ರಿಟೀಷರ ಪರವಾಗಿದ್ದ ಅಮರಸುಳ್ಯದ ಪಾಳೇಗಾರ ರಾಮಪ್ಪಯ್ಯನ ಹತ್ಯೆ, ಈ ಹತ್ಯೆಯ ನಂತರ ಅಟ್ಲೂರಿನ ಹೊಲೆಯರನ್ನು ಸ್ವತಂತ್ರರನ್ನಾಗಿಸುವದು, ರೈತರಿಗೆ ಮೂರು ವರ್ಷ ಕಂದಾಯ ಮನ್ನಾ ಘೋಷಿಸುವದು ಇಂಥ ಹಲವಾರು ಸಂದರ್ಭಗಳಲ್ಲಿ ಈ ಕಾದಂಬರಿ ಜನಪರವಾದ ಹೋರಾಟಗಳನ್ನು ದಾಖಲಿಸುತ್ತದೆ. 'ಸ್ವಾಮಿ ಅಪರಂಪಾರ' ಕೃತಿಯಲ್ಲಿ ಅಪರಂಪಾರನ ಎಲ್ಲ ಪ್ರಯತ್ನಗಳೂ ಹಾಲೇರಿ ವಂಶದ ಪುನರ್ ಸ್ಥಾಪನೆಗಾಗಿ ನಡೆದರೂ ಬ್ರಿಟೀಷ್‌ರ ವಿರುದ್ಧ ಆ ಕಾಲದ ಉಳಿದ ಸಂಸ್ಥಾನಿಕರ ಹಾಗೂ ಜನತೆಯ ಆಂತರಿಕ ತುಡಿತವನ್ನು ಗುರ್ತಿಸುವ ಕೆಲಸವನ್ನು ಈ ಕಾದಂಬರಿ ನಿರ್ವಹಿಸುತ್ತವೆ. ಮುಖ್ಯವಾಗಿ ಇವು ಐತಿಹಾಸಿಕ ಕಾದಂಬರಿಗಳಾದರೂ ಇಲ್ಲಿ ಬರುವ ನಾಯಕ ನಾಯಕಿಯರು ಕೇವಲ ರಾಜ ರಾಣಿಯರಾಗದೇ ಇತಿಹಾಸ ನಿರ್ಮಿಸುವಲ್ಲಿ ದುಡಿದ ಇತರ ಸಾಮಾನ್ಯ ಜನತೆ ಆ ಸ್ಥಾನಗಳಲ್ಲಿ ಬರುತ್ತಾರೆ. ಇತಿಹಾಸದ ಘಟನೆಗಳನ್ನು ನೆಪವಾಗಿಟ್ಟುಕೊಂಡು ಆ ಕಾಲದಲ್ಲಿ ಜನತೆ ಬಿಡುಗಡೆಗಾಗಿ ನಡೆಸಿದ ಹೋರಾಟಗಳನ್ನು ನಿರಂಜನ ಈ ಕಾದಂಬರಿಗಳ ಮೂಲಕ ಹೇಳಿದ್ದಾರೆ.

ಮೇಲೆ ವಿವರಿಸಿದ ಐದು ಕಾದಂಬರಿಗಳಲ್ಲಿ ಸಾಮ್ರಾಜ್ಯಶಾಹಿ ದಬ್ಬಾಳಿಕೆ ಹಾಗೂ ವರ್ಗವ್ಯವಸ್ಥೆಯ ವಿರುದ್ಧ ಜನತೆ ನಡೆಸಿದ ಬಿಡುಗಡೆಯ ಹೋರಾಟಗಳ ನೇರ ಅಭಿವ್ಯಕ್ತಿಯನ್ನು ಕಾಣಬಹುದು. ನಿರಂಜನರ ಇತರ ಕಾದಂಬರಿಗಳೂ ಸಹ ಸಾಮಾಜಿಕ ಅನಿಷ್ಟಗಳ ವಿರುದ್ಧ ಜನತೆ ಸಾಮಾಜಿಕ ಪ್ರಕ್ರಿಯೆಯಲ್ಲಿ ವ್ಯಕ್ತಿಗತವಾಗಿ ಅಥವಾ ಸಾಂಘಿಕವಾಗಿ ನಡೆಸಿದ ಹೋರಾಟಗಳನ್ನು ವ್ಯಕ್ತಪಡಿಸುತ್ತವೆ. ಇಂಥ ಕಾದಂಬರಿಗಳಲ್ಲಿ 'ನೋವು', 'ನಂದಗೋಕುಲ' ಭಾರತೀಯ ಜನಜೀವನದ ಸಾಮಾಜಿಕ ಸ್ಥಿತ್ಯಂತರ ಸಂದರ್ಭದ ಸಂಘರ್ಷವನ್ನು ಚಿತ್ರಿಸುತ್ತವೆ. 'ಸ್ಮರಣೆಯೊಂದೆ ಸಾಲದೆ?', 'ಅಭಯ', 'ಬನಶಂಕರಿ' ಮುಂತಾದ ಕಾದಂಬರಿಗಳು ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಯ ಕಟ್ಟುಪಾಡಿನಿಂದ ಬಿಡುಗಡೆ ಹೊಂದಲು ಮಹಿಳೆ ನಡೆಸುವ ಪರೋಕ್ಷ ಹೋರಾಟಗಳ ಕಥಾವಸ್ತುವನ್ನು ಹೊಂದಿವೆ.

ವೈಯಕ್ತಿಕ ಬದುಕಿನಲ್ಲಿಯೂ ನಿರಂತರವಾಗಿ ಹೋರಾಟ ನಡೆಸಿದ ನಿರಂಜನರು ಸ್ವತಂತ್ರ ಮನುಷ್ಯ, ಶೋಷಣೆರಹಿತ ಸಮಾಜದ ಆಶಯವನ್ನು ಹೊಂದಿದ್ದರಿಂದ ಅವರು ಆಯ್ದುಕೊಂಡ ಎಲ್ಲ ಕಾದಂಬರಿಗಳ ಕಥಾವಸ್ತು ಅವರ ಬಿಡುಗಡೆಯ ಹೋರಾಟದ ಆಶಯಗಳನ್ನೇ ವ್ಯಕ್ತಪಡಿಸುತ್ತವೆ. ನಿರಂಜನರ ಕಾದಂಬರಿಗಳಲ್ಲಿ ಬರುವ ಎಲ್ಲ ಪಾತ್ರಗಳು ವ್ಯಕ್ತಿಗತ ಸ್ವಾತಂತ್ರ್ಯದ ಉದ್ದೇಶವನ್ನು ಹೊಂದಿರದೆ ಇಡೀ ಸಮಾಜದ ಬಿಡುಗಡೆ ಹಾಗೂ ಹೊಸ ಸಮಾಜ ಸ್ಥಾಪನೆಯ ಉದ್ದೇಶವನ್ನು ಹೊಂದಿದೆ. ಈ ಕಾರಣಕ್ಕಾಗಿಯೇ ನಿರಂಜನರ ವೈಯಕ್ತಿಕ ಬದುಕು ಅವರು ನಂಬಿದ ತತ್ವಕ್ಕೆ ಮಾರ್ಗದರ್ಶಿಯಾಗಿದೆ.

# 'ನಿರಂಜನರ ಕಾದಂಬರಿಗಳಲ್ಲಿ ಮಧ್ಯಮ ವರ್ಗದ ಸ್ವರೂಪ ಚಿತ್ರಣ'

—ಹೊರೆಯಾಲ ದೊರೆಸ್ವಾಮಿ

ಬ್ರಿಟೀಷರ ಆಡಳಿತ ಮತ್ತು ಜೀವನ ವ್ಯವಸ್ಥೆಯ ಪ್ರಭಾವಕ್ಕೆ ಒಳಗಾದ ಭಾರತೀಯ ಸಮಾಜ ತನ್ನ ಅಂತರಂಗಿಕ ಬದುಕಿನಲ್ಲಿ ಹಲವಾರು ಬದಲಾವಣೆಗಳನ್ನು ಕಂಡುಕೊಂಡಿತು. ಸಾಂಪ್ರದಾಯಿಕವಾದ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ನೆಲೆಗಟ್ಟಿನ ಮೇಲೆ ತನ್ನ ವಿಕಾಸದ ಇತಿಮಿತಿಗಳನ್ನು ಗುರುತಿಸಿಕೊಂಡಿದ್ದ ಇಲ್ಲಿನ ಜನಸಮುದಾಯ ಪಾಶ್ಚಾತ್ಯ ಮನೋಧರ್ಮದ ಹೊಸತನಗಳಿಗೆ ಮಾರುಹೋಗಿ ಮೊದಲಬಾರಿಗೆ ತನ್ನ ಸಾಂಪ್ರದಾಯಿಕ ಮನಸ್ಥಿತಿಯಿಂದ ಕೊಂಚವಾದರೂ ಚಲಿಸಲು ಪ್ರಯತ್ನಿಸಿದ್ದು ಅದರ ಗತಿ ಚಲನಶೀಲವಾದ ಬದುಕಿಗೆ ಒಂದು ನಿದರ್ಶನ ಅನ್ನಬಹುದು. ಚಲನಶೀಲವಾದ ಬದುಕು ಹೊಸ ಆಯಾಮದೊಂದಿಗೆ ತನ್ನ ಹರಹನ್ನು ವಿಸ್ತರಿಸಿಕೊಳ್ಳುತ್ತ ಸಾಗತೊಡಗಿತು.

ಅಲ್ಲಿಯವರೆಗೂ ಒಡೆಯ-ಆಳು ಎಂಬ ಊಳಿಗಮಾನ್ಯ ಪರಿಕಲ್ಪನೆಯಲ್ಲೇ ಬೆಳೆದುಕೊಂಡು ಬಂದಿದ್ದ ಸಮಾಜ, ಆನಂತರ ಬೇರೆ ಬೇರೆ ವರ್ಗ ವಿಭೇದಗಳಾಗಿ ಕಾಣಿಸಿಕೊಳ್ಳತೊಡಗಿತು. ಔದ್ಯೋಗಿಕರಣ, ಆಧುನಿಕ ಆಡಳಿತಾತ್ಮಕ ವ್ಯವಸ್ಥೆ ಹೆಚ್ಚೆಚ್ಚು ಪ್ರಬಲವಾಗಿ ಬೆಳೆಯತೊಡಗಿದಂತೆಲ್ಲ ಸಮಾಜದ ಅಂತರಾಳದಿಂದ ಎರಡು ನೂತನ ವರ್ಗ ಪ್ರಭೇದಗಳು ಕಾಣಿಸಿಕೊಳ್ಳತೊಡಗಿದವು. ಅವೇ 'ಕಾರ್ಮಿಕವರ್ಗ' ಮತ್ತು 'ಮಧ್ಯಮವರ್ಗ'

ಈ ಎರಡೂ ವರ್ಗಗಳು ನೂತನ ಪರಿಸರಗಳನ್ನು ನಿರ್ಮಾಣ ಮಾಡುತ್ತ, ನೂತನ ಪಾರಿಭಾಷಿಕ ಜೀವನ ವಿಧಾನಗಳನ್ನು ಹುಟ್ಟುಹಾಕಿದವು,

ಮಧ್ಯಮ ವರ್ಗದ ಹುಟ್ಟಿನೊಂದಿಗೆ, ನಿಶ್ಚಿತ ದುಡಿಮೆ ಹಾಗೂ ನಿಶ್ಚಿತ ಆದಾಯ ನಿಗದಿತವಾಗತೊಡಗಿತು. ಆದರೆ, ಆಧುನಿಕ ಬದುಕಿನಾಸಕ್ತಿಗಳು ಹೆಚ್ಚುತ್ತ ಹೋಗಿ ಅವು ಕ್ರಮೇಣ ಆ ವರ್ಗದ ಅನೇಕ ಕನಸು, ಆಸೆ. ಹತಾಶೆ, ಅತೃಪ್ತಿ, ಏಕಾಂಗಿತನ, ಗಂಡು–ಹೆಣ್ಣಿನ ಸಂಬಂಧ, ಸಂಕೋಚ, ಆತಂಕ ಇವೇ ಮುಂತಾದವುಗಳನ್ನು ಹೇರಳವಾಗಿ ಬಿತ್ತುತ್ತ ಹೋದವು.

ಭಾರತದ ಮಟ್ಟಿಗೆ ಹೇಳುವುದಾದರೆ (ನನ್ನ ಅನುಭವ ಭಾರತೀಯು ವಾದ ಕನ್ನಡತನ) ಮೊದಮೊದಲು ಮಧ್ಯಮವರ್ಗ ರೂಪುಗೊಂಡದ್ದು ವಿಶೇಷವಾಗಿ ಬ್ರಾಹ್ಮಣ ಸಮುದಾಯದಲ್ಲಿ ಅದಕ್ಕೆ ಸ್ಪಷ್ಟವಾದ ಕಾರಣಗಳು ಇಲ್ಲದೆ ಇಲ್ಲ.

ಬ್ರಾಹ್ಮಣ ಸಮುದಾಯ ಸಂಖ್ಯಾದೃಷ್ಟಿಯಿಂದ ಅಲ್ಪಸಂಖ್ಯಾತವಾದು ದಾದರೂ ತನ್ನ ಬೌದ್ಧಿಕ ಪ್ರಭಾವದಿಂದಾಗಿ ಪ್ರಾಚೀನ ಕಾಲದಿಂದಲೂ ಬಹು ಸಂಖ್ಯಾತರ ಕೆಲಸಗಳನ್ನೇ ಮಾಡಿಕೊಂಡು ಬಂದಿದೆ. ಅದರಲ್ಲೂ ವಿಶೇಷ ವಾಗಿ ಸಾಂಸ್ಕೃತಿಕ ವಲಯದಲ್ಲಿ ಅದರ ಪ್ರಭಾವ ತೀರ ಗಾಢವಾದುದು. ಹೀಗೆ, ಬೌದ್ಧಿಕ ಕಾರಣಗಳಿಂದಾಗಿ ಚಿಂತನ ಮಂಥನಗಳನ್ನು ಬೆಳೆಸಿಕೊಳ್ಳುತ್ತ ಸಾಮಾಜಿಕ ಬದುಕಿನಲ್ಲಿ ಸಾಮಾನ್ಯವಾಗಿ ಮುಂಚೂಣಿಯಲ್ಲೇ ಇರತೊಡ ಗಿತು. ಯಾವುದೇ ಒಂದು ಹೊಸ ಸಂಗತಿ ಬಂದರೆ, ಅದರ ಸಾಧಕ-ಬಾಧಕ ಗಳನ್ನು ಪರೀಕ್ಷಿಸುವ, ವಿಶ್ಲೇಷಿಸುವ, ಸ್ವೀಕರಿಸುವ ಕಾರಣಗಳಿಂದಾಗಿ ಆ ಸಮುದಾಯ ಆಧುನಿಕ ಕೈಗಾರಿಕೆ, ಆಡಳಿತ ವ್ಯವಸ್ಥೆ ಈ ಎಲ್ಲ ಕ್ಷೇತ್ರ ಗಳಲ್ಲೂ ತನ್ನ ಮೇಲ್ಮೆಯನ್ನು ಸಾಧಿಸತೊಡಗಿತು.

ಮೊದಲಿನಿಂದಲೂ ಸಾಹಿತ್ಯಿಕ, ಸಾಂಸ್ಕೃತಿಕ ವಲಯಂಗಳಲ್ಲಿ ಮುಂಚೂಣಿಯಂಲ್ಲಿದ್ದ ಸಮುದಾಯ ತನ್ನ ವಲಯದಲ್ಲಷ್ಟೇ ಪರಿಭ್ರಮಿ ಸುತ್ತ ತನ್ನದೇ ಆದ ಕಾಣಿಕೆಗಳನ್ನು ನೀಡುತ್ತ ಬಂದಿರುವುದು ಇತಿಹಾಸದಿಂದ ನಮಗೆ ತಿಳಿದು ಬರುತ್ತದೆ. (ಶಿವರಾಮ ಕಾರಂತರಂತಹವರು ಅನ್ಯವಲಯ ಗಳಲ್ಲೂ ದುಡಿದು 'ಚೋಮನದುಡಿ'ಯಂಥ ಕೃತಿಗಳನ್ನು ಬರೆದ ಅಪವಾದ

ಎಲ್ಲವೆಂದಲ್ಲ) ಆದರೆ. ಕಾದಂಬರಿಗಳಿಗಿಂತ ಸಣ್ಣ ಕಥೆಗಳ ಪ್ರಕಾರದಲ್ಲಿ ಈ ಮಾತು ಇಷ್ಟು ಸರಿ ಎಂದು ಹೇಳಲಾಗುವುದಿಲ್ಲ. ಸಣ್ಣ ಕಥೆಗಾರನಾದವನಿಗೆ ತನ್ನದಲ್ಲದ ಇತರ ಸಮುದಾಯಗಳ ಒಂದು ಸಣ್ಣ ಅನುಭವವನ್ನೂ, ಪರಕಾಯ ಪ್ರವೇಶದಿಂದಾಗಿ ಕಥೆಯಾಗಿ ಹೆಣೆಯುವ ಸಾಧ್ಯತೆಗಳಿರುತ್ತವೆ. ಆದರೆ ಕಾದಂಬರಿಯು ಹರಹು ವಿಸ್ತಾರವಾದುದರಿಂದ ರಚನೆಗೆ ದಟ್ಟ ಅನುಭವಗಳ ವೈವಿಧ್ಯವು ಸಾಕಷ್ಟು ಇರಬೇಕಾಗಿರುವುದರಿಂದ, ರಚನೆ ಅಷ್ಟೊಂದು ಸುಲಭ ಸಾಧ್ಯವಲ್ಲ. ಜಾತಿ ಸತ್ಯ ಸಮಾಜವು ನಮ್ಮದು ಇಂದಿಗೂ ಆಗಿರುವುದರಿಂದ ಈ ವಾಸ್ತವಗಳನ್ನು ಸಧ್ಯದ ಮಟ್ಟಿಗೆ ಅನಿವಾರ್ಯವಾಗಿ ಸ್ವೀಕರಿಸಲೇ ಬೇಕಾಗುತ್ತದೆ.

ಲೇಖಕನಾದವನ ತಾತ್ವಿಕ ನಿಲುವು ಏನೇ ಇದ್ದರೂ ಅವನ ದಟ್ಟ ಅನುಭವಗಳು ಅವನ ಸಮುದಾಯದಲ್ಲೇ ಬಹುಪಾಲು ಹುದುಗಿರುತ್ತದೆ. ಹೀಗಾಗಿ. ಲೇಖಕನ ತಾತ್ವಿಕ ನಿಲುವುಗಳನ್ನು ಅವನ ಅನುಭವಗಳ ಪರಿಸರದಲ್ಲೇ ಹುಡುಕಿ ತೆಗೆಯಬೇಕಾದುದು ಅನಿವಾರ್ಯವಾಗುತ್ತದೆ. ಈ ಮಾತಿನ ಸತ್ಯಾಸತ್ಯತೆಯನ್ನು ಕನ್ನಡದ ಅನೇಕ ಲೇಖಕರಲ್ಲಿ ಕಾಣಬಹುದಾಗಿದೆ. ಪ್ರಗತಿಶೀಲ ಸಾಹಿತ್ಯ ಪ್ರಕಾರಕ್ಕೆ ಬಂದಾಗಲು ಈ ಮಾತಿನ ಧ್ವನಿಯನ್ನು ಗುರುತಿಸದೆ ಇರಲಾರೆವು. ಅ.ನ.ಕೃ., ತ.ರಾ.ಸು., ನಿರಂಜನ, ಬಸವರಾಜ ಕಟ್ಟೀಮನಿ ಇವರೇ ಮೊದಲಾದವರ ಕೃತಿಗಳನ್ನು ಈ ದೃಷ್ಟಿಯಿಂದ ಗಮನಿಸಬಹುದಾಗಿದೆ.

ಮಾರ್ಕ್ಸ್‌ವಾದಿ ದೃಷ್ಟಿಕೋನದ. ಪ್ರಗತಿಶೀಲ ಲೇಖಕರಲ್ಲಿ ಪ್ರಮುಖರಾದ ನಿರಂಜನರು ವಸ್ತು ವೈವಿಧ್ಯದಿಂದ ಕೂಡಿದ ಕಾದಂಬರಿಗಳನ್ನು ಕೊಡುಗೆಯಾಗಿ ನೀಡುವುದರೊಂದಿಗೆ ಸಮಾಜವನ್ನು ಚಿಕಿತ್ಸಕ ಮನೋಭಾವದಿಂದ ಪರೀಕ್ಷಿಸುವುದನ್ನೂ ನಾವು ಕಾಣಬಹುದು. ಹೊಸ ಚಿಂತನೆಯನ್ನು ಹೊತ್ತು ಹೊಸ ಬದಲಾವಣೆಗಳನ್ನು ಸ್ವಾಗತಿಸಿದ ನಿರಂಜನರ ಕಾದಂಬರಿಗಳನ್ನು ಸ್ಥೂಲವಾಗಿ ಮೂರು ಗುಂಪುಗಳಾಗಿ ವಿಭಜಿಸಬಹುದು–ಐತಿಹಾಸಿಕ, ಹೋರಾಟ ಪ್ರಧಾನ ಹಾಗೂ ಸಾಮಾಜಿಕವಾದವುಗಳು ಎಂದು. ಪ್ರಸ್ತುತ ಪ್ರಬಂಧದಲ್ಲಿ ಅವರ ಸಾಮಾಜಿಕ ಕಾದಂಬರಿಗಳತ್ತ ಗಮನ ಹರಿಸಲಾಗಿದೆ.

ವಾಸ್ತವ ಬದುಕಿನ ತಳಹದಿಯ ಮೇಲೆ ನಿರಂಜನರು ತಮ್ಮ ಕಾದಂಬರಿ ಸೌಧಗಳನ್ನು ಕಟ್ಟುವುದರಿಂದ ಅವರ ಸಾಮಾಜಿಕ ಕಾದಂಬರಿಗಳು ಸಮಕಾಲೀನ ಸಮಾಜದ ಸ್ಪಂದನಗಳನ್ನು ನಮಗೆ ನೀಡುತ್ತವೆ. 'ರಂಗಮ್ಮನ ವಠಾರ', 'ಪಾಲಿಗೆ ಬಂದದ್ದು ಪಂಚಾಮೃತ', 'ಏಕಾಂಗಿನಿ'. 'ದೀಕ್ಷೆ', 'ದೂರನಕ್ಷತ್ರ', 'ನವೋದಯ' ಇವೇ ಮುಂತಾದ ಕಾದಂಬರಿಗಳಲ್ಲಿ ಈ ಅಂಶಗಳನ್ನು ಗುರುತಿಸಬಹುದು.

ಮಾನವೀಯತೆಯ ನೆಲೆಯಲ್ಲಿ ಬದುಕನ್ನು ನೋಡಲು ಹಂಬಲಿಸುವ ಕಾದಂಬರಿಕಾರ ನಿರಂಜನರು ಅಲ್ಲಲ್ಲಿ ಪ್ರಗತಿಶೀಲ ಮನೋಭಾವವನ್ನು ಪ್ರಕಟಪಡಿಸಲು ಪ್ರಯತ್ನಿಸಿರುವುದನ್ನು ನಾವು ಕಾಣಬಹುದಾಗಿದೆ. 'ನವೋದಯ' ಕಾದಂಬರಿಯ ಅಂತ್ಯದಲ್ಲಿ ಹಳೆಯ ಮೈಸೂರು ಸಂಸ್ಥಾನ ವಿಶಾಲವಾಗಿ ಮೈಸೂರು ರಾಜ್ಯವಾಗಿ ಉದಯವಾಗುವುದೂ, ಜಯದೇವನ ಹೆಂಡತಿ ಸುನಂದ ಗಂಡುಮಗುವೊಂದಕ್ಕೆ ಜನ್ಮ ನೀಡುವುದೂ ಏಕಕಾಲದಲ್ಲಿ ಸಂಭವಿಸಿ ನವೋದಯಕ್ಕೆ ಕಾರಣವಾಗುವುದನ್ನು ಲೇಖಕರು ಧ್ವನಿಪೂರ್ವಕವಾಗಿ ತಿಳಿಸಲು ಯತ್ನಿಸಿದ್ದಾರೆ. ಹಾಗೆಯೇ 'ಏಕಾಂಗಿನಿ' ಕಾದಂಬರಿಯಲ್ಲಿ ಗಂಡ ಪುಟ್ಟಣ್ಣನಿಂದ ಅನೇಕ ದೈಹಿಕ ಹಾಗೂ ಮಾನಸಿಕ ಹಿಂಸೆಗೊಳಗಾಗುವ ಸುನಂದ, ಅವನಿಂದ ವಿವಾಹ ವಿಚ್ಛೇದನ ಪಡೆದು ಬದುಕಿನಲ್ಲಿ ಏಕಾಂಗಿಯಾದರೂ, ಛಲತೊಟ್ಟು ಬಾಳಲು ನಿರ್ಧರಿಸುವುದನ್ನು ಲೇಖಕರು ಪರೋಕ್ಷವಾಗಿ ಸಮರ್ಥಿಸುತ್ತಾರೆ. ಈ ಕಾದಂಬರಿಯ ಪ್ರಾರಂಭ ಹಾಗೂ ಇದರ ಮೊದಲ ಭಾಗವಾದ 'ಪಾಲಿಗೆ ಬಂದದ್ದು ಪಂಚಾಮೃತ'ದಲ್ಲಿ ಅಳುಮುಂಜಿ ಪಾತ್ರದ ಹೆಣ್ಣಾಗಿ ರೂಪಿತವಾಗಿರುವ ಸುನಂದ ಕ್ರಮೇಣ ಜೀವನ ಸಂಘರ್ಷದ ಸಂದರ್ಭಗಳೊಂದಿಗೆ ಬೆಳೆಯುತ್ತ ಹೋಗಿ, ಒಬ್ಬ ಸದೃಢವಾದ ಹೆಣ್ಣಾಗಿ ಪರಿವರ್ತನೆಗೊಳ್ಳುವುದನ್ನು ನಾವು ಗಮನಿಸಬಹುದು. 'ಏಕಾಂಗಿನಿ' ಕಾದಂಬರಿಯಲ್ಲೇ ಲೇಖಕರು ಹಿಂದೂ ವಿವಾಹ ವಿಚ್ಛೇದನದ ನಿಯಮಾವಳಿಗಳ ಪಟ್ಟಿಯನ್ನು ನೀಡಿರುವುದರಲ್ಲೂ ನಾವು ಈ ಅಂಶಗಳನ್ನು ಗುರುತಿಸಬಹುದಾಗಿದೆ. ಜಡಗಟ್ಟಿದ ಸಮಾಜದಿಂದ ಹೆಣ್ಣಾದವಳು ಸಿಡಿದು ಬದಲಾವಣೆಯತ್ತ ಸಾಗಬೇಕು ಎಂಬುದರ ಧ್ವನಿ ಸೂಚನೆ ಇಲ್ಲಿದೆ.

ನಗರ ಜೀವನದ ಮಧ್ಯಮ ವರ್ಗದ ಒಳಹೊರಗುಗಳನ್ನು ಸಮರ್ಥವಾಗಿ ಹಿಡಿದಿಡುವ ಒಂದು ಸಾರ್ಥಕ ಪ್ರಯತ್ನ 'ರಂಗಮ್ಮನ ವಠಾರ'. ನಗರ ಮಧ್ಯಮ ವರ್ಗದ ಆಸೆ. ನಿರಾಶೆ. ಹತಾಶೆ, ಕನಸು, ಭ್ರಮನಿರಸನ. ಆತಂಕ, ಅತೃಪ್ತಿ. ಸಂಕೋಚ. ಬಿಗುಮಾನಗಳನ್ನೆಲ್ಲ ಮೈದುಂಬಿಕೊಂಡು ತಳೆದಿರುವ ಕಾದಂಬರಿ 'ರಂಗಮ್ಮನ ವಠಾರ' ಎಲ್ಲ ವಠಾರಗಳ ಪ್ರಾತಿನಿಧಿಕ ಕೃತಿ. ಮಧ್ಯಮ ವರ್ಗದ ಮಾನಸಿಕ ಒಳತೋಟಿಯನ್ನು ಸಾಂಕೇತಿಕವಾಗಿ ಪ್ರತಿಬಿಂಬಿಸುವ ಕೃತಿ.

ರಂಗಮ್ಮನ ವಠಾರದಲ್ಲಿರುವ ರಾಮಚಂದ್ರಯ್ಯ, ಅಹಲ್ಯಾ, ಮೀನಾಕ್ಷಿ, ಕಮಲಮ್ಮ, ಪೋಲಿಸ್ ಕಾನ್‌ಸ್ಟೇಬಲ್ ರಂಗಸ್ವಾಮಿ, ಲಕ್ಷ್ಮೀನಾರಾಯಣಯ್ಯ, ಜಯರಾಮು, ವೆಂಕಟಸುಬ್ಬಮ್ಮ, ರಾಧಾ, ಹೊಸದಾಗಿ ವಠಾರಕ್ಕೆ ಬಂದ ಶಂಕರನಾರಾಯಣಯ್ಯ–ಚಂಪಾ ದಂಪತಿಗಳು ಕೊನೆಗೆ ವಠಾರದಲ್ಲೇ ಅಸುನೀಗಿದ ನಾರಾಯಣಿ ಇವರೆಲ್ಲ ಮಧ್ಯಮ ವರ್ಗದ ಏರಿಳಿತದ ಬದುಕಿನ ಪ್ರತಿನಿಧಿಗಳಾಗಿ ಬಂದು ಅದರ ಇತಿಮಿತಿಗಳನ್ನು ನಮಗೆ ಪರಿಚಯಿಸುತ್ತಾರೆ.

ಮಧ್ಯಮ ವರ್ಗದ ಒಂದು ಲಕ್ಷಣ ಬಿಗುಮಾನ. ಈ ಬಿಗುಮಾನ ಮೂಡಿಬರುವುದೇ ಮುಖ್ಯವಾಗಿ ಆರ್ಥಿಕ ಅಸಮಾನತೆಯಿಂದ. ಆಧುನಿಕವಾದ ಅನೇಕ ಹಂಬಲಗಳು ನಗರ ಪರಿಸರದಲ್ಲಿ ತನ್ನ ಕಬಂಧ ಬಾಹುವನ್ನು ಇನ್ನಿಲ್ಲದೆ ಚಾಚುತ್ತ ನಡೆದರೂ ಅದನ್ನು ದಕ್ಕಿಸಿಕೊಳ್ಳುವ ಸಾಮರ್ಥ್ಯ ಮಾತ್ರ ಮಿತಿಯದ್ದೇ ಆಗಿರುತ್ತದೆ. ಈ ಅಂಶವನ್ನು ನಾವು ಸ್ಪಷ್ಟವಾಗಿ ಶಂಕರನಾರಾಯಣಯ್ಯ–ಚಂಪಾ ಅವರ ದಾಂಪತ್ಯ ಜೀವನದಲ್ಲಿ ಗುರುತಿಸಬಹುದು. ಸಂಕೋಚ-ಸಭ್ಯತೆಗಳ ನಡುವೆಯೇ ತನ್ನ ವ್ಯಕ್ತಿತ್ವವನ್ನು ಉಳಿಸಿಕೊಳ್ಳಲು. ಬಡತನವನ್ನು ಮುಚ್ಚಿಕೊಳ್ಳಲು ಹಂಬಲಿಸುವ ಶಂಕರನಾರಾಯಣಯ್ಯ ರಂಗಮ್ಮನ ವಠಾರಕ್ಕೆ ಬಾಡಿಗೆಗೆ ಬಂದ ದಿವಸದಿಂದಲೂ ಮಗುವನ್ನಾಗಿ ಪ್ರಯತ್ನಿಸುವುದನ್ನು ನಾವು ಗುರುತಿಸಲಾರದೆ ಇರಲಾರೆವು.

"ಕರಾರು ಪತ್ರವನ್ನು ಪಡೆದುಕೊಂಡು ರಂಗಮ್ಮ ನಾಜೂಕಾಗಿ ಮಡಚಿ ಕೈಯಲ್ಲೇ ಇಟ್ಟುಕೊಂಡರು.

ಶಂಕರನಾರಾಯಣಯ್ಯನಿಗೆ ಒಂದು ತರಹ ಆಯಿತು. ಆತ ಹಣವನ್ನು ಕೊಟ್ಟಿದ್ದ, ಸಹಿಯನ್ನೂ ಹಾಕಿದ್ದ. ಆದರೆ ಹಣ ತಲಪಿದುದಕ್ಕೆ ವಠಾರದ ಒಡತಿಯಿಂದ ರಶೀತಿ ಬಂದಿರಲಿಲ್ಲ.

'ಹೊರಡ್ತೀರಾ ಹಾಗಾದ್ರೆ ?'

—ಎಂದು ರಂಗಮ್ಮ ಕೇಳಿದರು.

'ಹೂಂ'

ಆತ ಎದ್ದುನಿಂತ. ಪೆಚ್ಚುಮೋರೆಯ ಲಕ್ಷಣ ಮೊದಲ ಬಾರಿಗೆ ಮೂಡಿ ಮರೆಯಾಯಿತು.

'ಹಣ ತಲುಪಿದ್ದಕ್ಕೆ ರಶೀತಿ ಕೊಡ್ತೀರಾ ರಂಗಮ್ನೋರೆ ?'

'ರಶೀತೀನೆ ? ಏನೂ ಪರವಾಗಿಲ್ಲ. ಹೋಗ್ಬಿಟ್ಟು ಬನ್ನಿ'

ಶಂಕರನಾರಾಯಣಯ್ಯ ಮನಸ್ಸಿನೊಳಗೇ ಅನುಮಾನಿಸಿದರೂ ಹೊರಗೆ ಒಣನಗೆ ತೋರುತ್ತಾ ಹೊರಡಲು ಸಿದ್ಧನಾದ.

ಬಾಡಿಗೆ ಹಣ ನೀಡಿದ್ದಕ್ಕೆ ರಶೀತಿ ಈಸಿಕೊಳ್ಳುವ ತವಕವಿರುವುದಾದರೂ ಎಲ್ಲೋ ಒಂದುಕಡೆ ಕೇಳಲಾರದ ಬಿಗುಮಾನ ಶಂಕರನಾರಾಯಣಯ್ಯನನ್ನು ಬಾಧಿಸುತ್ತದೆ. ಅದೇ ರೀತಿ ಮನೆಗೆ ಸಾಮಾನು ಸಾಗಿಸಿದಾಗ 'ಚಾಪೆಯಲ್ಲಿ ಸುತ್ತಿದ್ದ ಪೊರಕೆಗಳೆರಡು' ಅದೇ ಮನಸ್ಥಿತಿಯನ್ನು ತಿಳಿಸುತ್ತದೆ. ಚಂಪಾ ವಠಾರಕ್ಕೆ ಬಂದು ಹಾಲುಕೊಳ್ಳುವ ಹೊಸತರಲ್ಲಿ ಅವಳು ದಿನಕ್ಕೊಂದೇ ಪಾವು ಹಾಲು ಕೊಳ್ಳುವುದನ್ನು ನೋಡಿ ದಿನಕ್ಕೊಂದೇ ಪಾವು. ಇವರೂ ನಮ್ಮ ಹಾಗೆಯೇ ಎಂದುಕೊಂಡರು, ಎಂದು ವಠಾರದ ಇನ್ನಿತರ ಹೆಂಗಸರು ಸಮಾಧಾನಪಟ್ಟುಕೊಳ್ಳುವಲ್ಲಿನ ಹಿಂದಿನ ಮನಸ್ಥಿತಿಯೂ ಇದೇ ಆಗಿದೆ. ಮಧ್ಯಮ ವರ್ಗದ ಮನಸ್ಥಿತಿಯೇ ಹಾಗೆ. ಇಲ್ಲದ್ದನ್ನು ಇವೆ ಎಂದು ಹೇಳಿಕೊಳ್ಳುವುದು. ಇರುವುದನ್ನು ಇಲ್ಲ ಎಂದು ಮುಚ್ಚಿಟ್ಟುಕೊಳ್ಳುವುದು. ತಮ್ಮದೇ ಪರಿಸ್ಥಿತಿಯಲ್ಲಿರುವವರನ್ನು ಕಂಡಾಗ ಏನೊ ಸಮಾಧಾನಗೊಂಡಂತೆ ತೃಪ್ತಿ ಪಟ್ಟುಕೊಳ್ಳುವುದು.

ವ್ಯಕ್ತಿಗಳಲ್ಲಿರುವ ಪ್ರತಿಭಾ ಸಂಪನ್ನತೆ ಪೋಷಣೆ ಸಿಗದಿದ್ದಾಗ ಇದ್ದಲ್ಲೇ ಕಮರಿ ಹೋಗುತ್ತದೆ. ಆದರೆ, ಅದನ್ನು ಗುರುತಿಸಿದಾಗ ? ಆಗುವುದೇನು? ಈ ಅಂಶವನ್ನು ನಾವು ಅಹಲ್ಯಾ ಹಾಗೂ ಚಂಪಾ ಅವರ ಹಾಡುಗಾರಿಕೆಯ ಸಂದರ್ಭದಲ್ಲಿ ಕಾಣಬಹುದು. ಅಹಲ್ಯಾ ಹಾಡುಗಾರ್ತಿ. ಹಾಗೆಯೇ ವಠಾರಕ್ಕೆ ಬಂದಿರುವ ಚಂಪಾ ಕೂಡ. ಆದರೆ, ಇಬ್ಬರೂ ಹಾಡಂಗಾರರೆಂದು ಪರಸ್ಪರ ತಿಳುವಳಿಕೆ ಬರುವುದು ಹಾಡೊಂದನ್ನು ಅಹಲ್ಯಾ ತನ್ನ ಮನೆಯಲ್ಲಿ ಗುನುಗಿಕೊಳ್ಳುತ್ತಿರುವಾಗ. ಅದೂ ಆಕಸ್ಮಿಕವಾಗಿ ಚಂಪಾವತಿ ಅಲ್ಲಿಗೆ ಬರುವುದರಿಂದ. ಇಬ್ಬರು ಒಳ್ಳೆಯ ಹಾಡುಗಾರ್ತಿಯರಾದರೂ ಪರಸ್ಪರ ಸಂಕೋಚ, ಬಿಗುಮಾನ. ಆದರೆ, ಈ ಸಂಕೋಚ, ಬಿಗುಮಾನ ನಾಪತ್ತೆಯಾಗುವುದು ಪರಸ್ಪರ ತಿಳುವಳಿಕೆಯಿಂದ. ಒಬ್ಬರಿಗೊಬ್ಬರು ಪೂರಕವಾದಾಗ ಪ್ರತಿಭೆ ಹೊರಹೊಮ್ಮುವುದು. ಅವರಿಬ್ಬರ ಹಾಡಿನ ಪ್ರತಿಭೆ ಆಗ ವಠಾರದ ಇನ್ನಿತರರಿಗೂ ತಿಳಿದು ಮತ್ತಷ್ಟು ಬೆಳೆಯುವುದಕ್ಕೆ ಉತ್ತಮ ವಾತಾವರಣವನ್ನು ಕಲ್ಪಿಸಿಕೊಡುತ್ತದೆ. ಈ ಮಧ್ಯಮ ವರ್ಗದ ಬ್ರಾಹ್ಮಣ ಸೌಹಾರ್ದತೆಯನ್ನು ಹಿಡಿದಿಡುವ ಪ್ರಯತ್ನದಲ್ಲಿ ನಿರಂಜನರು ಸಾಮಯಿಕ ಬರವಣಿಗೆಯನ್ನು ಮಾಡಿದ್ದಾರೆ.

ಮಧ್ಯಮ ವರ್ಗದ ಕುಟುಂಬಗಳ ಆಶೆ ಆಶೋತ್ತರಗಳೆಲ್ಲ ಕೈಗೂಡದೆ ಹೋದಾಗ ಆಗುವ ಹತಾಶೆ, ಕೈಗೂಡಿದಾಗ ಆಗುವ ತೃಪ್ತಿ ಈ ಮನಸ್ಥಿತಿಗಳನ್ನೂ ಕಾದಂಬರಿಕಾರ ನಿರಂಜನರು ಚಿತ್ರಿಸಲು ಪ್ರಯತ್ನ ನಡೆಸಿದ್ದಾರೆ. ಪುಸ್ತಕ ವ್ಯಾಪಾರಿಯೊಬ್ಬನ ಕುಟುಂಬಕ್ಕೆ ಸೇರಿದ ಜಯರಾಮನ ಪಾತ್ರ ಚಿತ್ರಣ ಇದಕ್ಕೊಂದು ನಿದರ್ಶನ ಎನ್ನಬಹುದು. ವಿದ್ಯಾರ್ಥಿ ದೆಶೆಯಲ್ಲಿರುವ ಜಯರಾಮ ತನ್ನ ವಿದ್ಯಾರ್ಥಿ ಜೀವನಕ್ಕಿಂತ ಹೆಚ್ಚಾಗಿ ಆಸಕ್ತಿ ಹೊಂದಿರುವುದು ಸಾಹಿತ್ಯ ಕ್ಷೇತ್ರದಲ್ಲಿ. ಸಾಹಿತ್ಯ ಕ್ಷೇತ್ರದಲ್ಲಿ ವಿಶೇಷವಾದದ್ದೇನನ್ನಾದರೂ ಸಾಧಿಸಬೇಕೆಂಬ ಬಯಕೆ ಅವನದು. ಮೂಲತಃ ಕೊಂಚ ಭಾವುಕ ಮನಸ್ಥಿತಿಯವನು ಜಯರಾಮ. ಹಾಗೂ ಏಕಾಂಗಿತನವನ್ನೂ ಇಚ್ಛೆಪಡುವವನು. ವಾಚನಾಲಯಕ್ಕೆ ಹೋಗುತ್ತೇನೆಂದು ತಂಗಿ ರಾಧೆಗೆ ಹೇಳಿ ಆ ನಂತರ ಮಲ್ಲೇಶ್ವರ–ಯಶವಂತಪುರದ ದಾರಿಯಲ್ಲಿ ಪ್ರಕೃತಿ ಸೌಂದರ್ಯವನ್ನು ಸವಿಯುತ್ತ ಹೋಗುವ ಜಯರಾಮ ಮಧ್ಯಮ ವರ್ಗದ ಕನಸು

ಗಾರಿಕೆಯ ಒಬ್ಬ ಪ್ರತಿನಿಧಿ ಎಂದು ಹೇಳಿದ್ದರೂ ತಪ್ಪಾಗಲಾರದು. ಅದೇ ರೀತಿಯ ಕೆಳ ಮಧ್ಯಮ ವರ್ಗದ ಜಯದೇವ ಆದರ್ಶದ ಹಂಬಲ ಹೊತ್ತು ಉಪಾಧ್ಯಾಯ ವೃತ್ತಿಯಲ್ಲಿ ಪ್ರವೇಶಿಸುವ ಮನಸ್ಥಿತಿ 'ದೂರದ ನಕ್ಷತ್ರ'ದಲ್ಲಿ ಇದೇ ಆಗಿದೆ. 'ದೂರದ ನಕ್ಷತ್ರ' ಕಾದಂಬರಿ ಮಧ್ಯಮ ವರ್ಗದ ಪರಿಸರದಲ್ಲೇ ಬರುವುದಾದರೂ ಒಬ್ಬ ಆದರ್ಶ ಉಪಾಧ್ಯಾಯನ ಹುಟ್ಟುವಿಕೆಯಲ್ಲಿ ತನ್ನ ಸಾರ್ಥಕತೆಯನ್ನು ಕಂಡುಕೊಳ್ಳುತ್ತದೆ. ಕಾದಂಬರಿಯಲ್ಲಿ ಬರುವ ನಂಜುಂಡಯ್ಯ, ರಂಗರಾಯ, ವೆಂಕಟರಾಯ ಉಪಾಧ್ಯಾಯ ವೃತ್ತಿಯಲ್ಲೇ ಕಂಡುಬರುವ ವಿವಿಧ ಮನಸ್ಥಿತಿಗಳನ್ನು ಪ್ರತಿನಿಧಿಸುವ ವ್ಯಕ್ತಿಗಳಾಗಿ ಮೂಡಿ ಬಂದಿದ್ದಾರೆ. ಇವರೆಲ್ಲರಿಗಿಂತ ಕಿರಿಯನಾದ ಜಯದೇವ ಲೋಕೋತ್ತರವಾದ ಆಸೆಗಳನ್ನು ಇರಿಸಿಕೊಂಡವನು. ಆ ಆಸೆಗಳ ನಡುವೆಯೇ ತನ್ನ ವೈಯಕ್ತಿಕ ಬದುಕಿನ ಪೂರೈಕೆಗಳನ್ನು ಅಗುಮಾಡಿಕೊಳ್ಳಲೂ ಪ್ರಯತ್ನಿಸುವವನು. ಹೀಗೆ, ಇತರರಿಗಿಂತ ಭಿನ್ನವಾಗಿ ವ್ಯವಸ್ಥೆಯೊಳಗೇ ಆದರ್ಶೀಕೃತ ಬದುಕಿಗೆ ಹಂಬಲಿಸುವ ಜಯದೇವ ಮಗುವೊಂದನ್ನು ಪಡೆಯುವುದರೊಂದಿಗೆ ವ್ಯವಸ್ಥೆಯ ಮಿತಿಯಲ್ಲೇ ನಿಲ್ಲುವನು.

'ದೀಕ್ಷೆ' ಕಾದಂಬರಿಯಲ್ಲಿ ಯುವ ಪತ್ರಕರ್ತನೊಬ್ಬನ ಪ್ರಾರಂಭಿಕ ಜೀವನವನ್ನು ಚಿತ್ರಿಸಲು ಪ್ರಯತ್ನಿಸಿರುವ ನಿರಂಜನರು ಹೆಚ್ಚು ಸಂಕೀರ್ಣವಲ್ಲದ ರೀತಿಯಲ್ಲಿ ಮುರುಳೀಧರನನ್ನು ಕಡೆದಿದ್ದಾರೆ. ಕೆಳಮಧ್ಯಮ ವರ್ಗದಿಂದ ಬರುವ ಒಬ್ಬ ಪತ್ರಕರ್ತನ ಜೀವನದ ವಿವಿಧ ಮಜಲುಗಳನ್ನು ಹಿಡಿದಿಡಲು ಕಾದಂಬರಿಕಾರರು ಪ್ರಯತ್ನಿಸಿರುವರಾದರೂ ಕಾದಂಬರಿಯ ಒಟ್ಟು ಬಂಧ ಅಷ್ಟೇನು ಪರಿಣಾಮಕಾರಿಯಾಗಿಲ್ಲ.

ಈ ದೃಷ್ಟಿಯಿಂದ 'ಪಾಲಿಗೆ ಬಂದದ್ದು ಪಂಚಾಮೃತ' ಹಾಗೂ 'ಏಕಾಂಗಿನಿ' ಕಾದಂಬರಿಗಳು (ಭಾಗ-೧ ಮತ್ತು ೨) ತನ್ನ ಕಥಾವಸ್ತುವಿನಿಂದಾಗಿ ಬೇರೆ ಯದಕ್ಕಿಂತ ಕೊಂಚ ಭಿನ್ನವೇ ಆಗಿದೆ. ಪ್ರಾರಂಭದಲ್ಲಿ ರಂಗಮ್ಮನ ವಠಾರದ ಒಂದು ಹೆಣ್ಣಾಗಿ ಕಾಣಿಸಿಕೊಳ್ಳುವ ಸುನಂದ, ಅನಂತರ ಪರಿಸ್ಥಿತಿಗಳೊಡನೆ ಸಂಘರ್ಷಿಸಿ ಆಧುನಿಕ ಹೆಣ್ಣಿನ ಸ್ತ್ರೀತ್ವದ ಪ್ರತೀಕವಾಗಿ ಹೊರಹೊಮ್ಮಿ ಬರುತ್ತಾಳೆ. ತಾಯಿಯ ಮಾತಿಗೆ ಕಟ್ಟುಬಿದ್ದ ಒಳ್ಳೆಯ ಮನಸ್ಸಿನಿಂದ ಸುನಂದಳನ್ನು

ಮದುವೆಯಾಗುವ ಪುಟ್ಟಣ್ಣ ಹೆಂಡತಿಯಿಂದ ದೂರವಾಗುವ ವ್ಯವಹಾರಗಳಲ್ಲೇ ಮುಂದುವರಿಯುತ್ತಾನೆ. ಎಷ್ಟೆಲ್ಲ ಸೋತರೂ ತನ್ನ ಬದುಕು ಹಸನಾಗಿರುವುದನ್ನು ಕಂಡುಕೊಂಡ ಸುನಂದ ಗಂಡನಿಂದ ಬೇರೆಯಾಗುವುದನ್ನು ಪ್ರಕಟಿಸುವುದು ಇಂದಿಗೆ ಅಷ್ಟೇನು ಹೊಸತೇನು ಅಲ್ಲದಿದ್ದರೂ ನಿರಂಜನರು ಕಾದಂಬರಿ ಬರೆಯುತ್ತಿದ್ದ ಕಾಲಕ್ಕೆ (೧೯೫೦ರ ದಶಕದ ಸುಮಾರು) ಬಹುದೊಡ್ಡ ಘಟನೆಯೇ ಹೌದು. ಅಂದಿನ ಸಾಮಾಜಿಕ ಪರಿಸ್ಥಿತಿಯಲ್ಲಿ ಹೆಣ್ಣಾದವಳಿಗೆ ಇಂತಹದೊಂದು ಅಭಿಪ್ರಾಯ ಮೂಡಿಬರುವುದು ಸಾಮಾನ್ಯ ಸಂಗತಿಯೇನಲ್ಲ. ಹೆಣ್ಣಾದವಳಿಗೆ ಸ್ವತಂತ್ರ ಅಸ್ತಿತ್ವ ಇದೆ. ಅವಳು ಗಂಡ ಕೊಡುವ ಎಲ್ಲ ಕಷ್ಟಗಳನ್ನು ಸಹಿಸಿಕೊಂಡು ಅವನ ಅಡಿಯಾಳಾಗೇ ಇರಬೇಕೆಂಬ ವಾದವನ್ನು ಪ್ರಗತಿಶೀಲರಾದ ನಿರಂಜನರು ಒಪ್ಪುವುದೂ ಇಲ್ಲ. ಸುನಂದಳ ವಿವಾಹ ವಿಚ್ಛೇದನಕ್ಕೆ ಪರೋಕ್ಷವಾಗಿ ಬೆಂಬಲವಾಗೇ ನಿಲ್ಲುತ್ತಾರೆ ಎನ್ನಬಹುದು.

ಗಂಡನ ಮನೆಯಲ್ಲಿ ಎಣೆಯಿಲ್ಲದ ಕಷ್ಟಗಳಲ್ಲಿ ಬೆಂದುನೊಂದು ಹಣ್ಣಾಗಿರುವ ಸುನಂದ ಅಂತಿಮವಾಗಿ ಅವನಿಂದ ಬೇರೆಯಾಗಿ ಬದುಕಬೇಕೆನ್ನುವ ನಿರ್ಧಾರಕ್ಕೆ ಬರುವುದು ಅವಳ ಆಧುನಿಕ ಪ್ರಜ್ಞೆಗೆ ಸಾಕ್ಷಿಭೂತವಾಗಿ ನಿಲ್ಲುತ್ತದೆ. ಅವಳು ತನ್ನ ಗೆಳತಿ ಕುಸುಮಾಳೊಂದಿಗೆ ಹೇಳುವ ಈ ಮಾತುಗಳನ್ನು ನೋಡಿ 'ನಾನು ಹಿಂದೂ ಸ್ತ್ರೀ. ಪ್ರತಿಯೊಬ್ಬರೂ ನನಗದನ್ನು ನೆನಪು ಮಾಡ್ಸ್ತಾನೇ ಇರ್ತಾರೆ. ನನ್ನನ್ನು ಬೆನ್ನ ಹಿಂದೆ ಲೇವಡಿ ಮಾಡೋ ಜನರೋ ಎದುರಿಗೆ ನೀತಿ ಪಾಠದ ಮಂತ್ರ ಜಪಿಸುತ್ತಾರೆ. ಗೃಹದೇವತೆ-ಆದರ್ಶ ಸತಿ! ಎಂಥೆಂಥ ಕಲ್ಪನೆಗಳು. ಆದರೆ, ನಾನು ದೇವತೆಯಲ್ಲ ಕುಸುಮಾ. ದೇವತೆಯಾಗಿರುವುದು ನನಗೆ ಬೇಕಾಗಿಲ್ಲ. ನಾನು ಮನುಷ್ಯಳಾದರೆ ಸಾಕು – ಒಳ್ಳೆ ಮನುಷ್ಯಳಾದರೆ ಸಾಕು. ನಾನು ಸ್ವತಂತ್ರಳಾದರೆ ಮಾತ್ರ ಬದುಕೋದು ಸಾಧ್ಯ" ಮುಂದೆ ಅವಳ ಈ ನಿರ್ಧಾರವೇ ಅವಳು ಗಂಡನಿಂದ ವಿಚ್ಛೇದನ ಪಡೆಯಲು ನಾಂದಿಯಾಗುತ್ತದೆ ಮತ್ತು ಸ್ವತಂತ್ರಳಾಗಿ ತಾನೂ ತನ್ನ ಮಗಳು ಸರಸ್ವತಿ ಬದುಕಲು–ಶಿಶು ವಿಹಾರದಲ್ಲಿಯೂ ಉದ್ಯೋಗವನ್ನು ಪಡೆಯಲು ನೆರವಾಗುತ್ತದೆ. ಸಾಕಷ್ಟು ಲೋಕಜ್ಞಾನವುಳ್ಳ

ಕುಸುಮ ಕೂಡ ಈ ಅಭಿಪ್ರಾಯವನ್ನು ಬೆಂಬಲಿಸುತ್ತಾಳೆ. ಅಲ್ಲದೆ 'ವಿವಾಹ ವಿಚ್ಛೇದನದ ತತ್ವ ನನಗೆ ಒಪ್ಪಿಗೆ. ಆದರೆ ಅದನ್ನ ಆದ ಅನ್ಯಾಯ ಸರಿಪಡಿಸೋಕೆ ಉಪಯೋಗಿಸ್ಬೇಕು. ಹೊಸ ಅನ್ಯಾಯ ಮಾಡೋದಕ್ಕಲ್ಲ' ಎಂಬ ತಿಳುವಳಿಕೆಯನ್ನು ಹೇಳುವ ಮೂಲಕ ಗೆಳತಿಯ ಜವಾಬ್ದಾರಿ ವಿಶೇಷವಾಗಿ ನೈತಿಕ ಜವಾಬ್ದಾರಿಯ ಬಗ್ಗೆ ಹೇಳುವ, ಎಚ್ಚರಿಕೆಯನ್ನು ನೀಡುವುದನ್ನು ಈ ದೃಷ್ಟಿಯಿಂದ ನೋಡಬೇಕಾಗಿದೆ.

ಕಾದಂಬರಿಯ ಕೊನೆಯಲ್ಲಿ ಸುನಂದ ತನ್ನ ತಂಗಿ ವಿಜಯಳಿಗೆ 'ನನ್ನ ಮನಸ್ಸು ನಿರ್ಮಲವಾಗಿದೆ ವಿಜಯಾ. ಹೃದಯದ ಮೇಲೆ ಆಗಿದ್ದ ಗಾಯಗಳು ಮಾಯುತ್ತಾ ಬಂದಿದೆ. ಘೋರ ರಾತ್ರಿ ಕಳೆದು ಬೆಳಕು ಹರಿದ ಹಾಗೆ, ನನಗಿದು ಪುನರ್ಜನ್ಮ ನೀಡಿದೆ ವಿಜಯಾ. ನಾನು ಯಾರಿಗೂ ಕೆಟ್ಟದ್ದು ಮಾಡಿಲ್ಲ. ಮುಂದೆಯೋ ಅಷ್ಟೇ. ನನ್ನಿಂದ ಯಾರಿಗೂ ಕೆಡಕಾಗದು ಅಷ್ಟೇ ಅಲ್ಲ. ಒಳ್ಳೆದು ಮಾಡುವುದು ಸಾಧ್ಯವೇನೋ ಅಂತ ಯತ್ನಿಸುತ್ತೇನೆ. ಒಳ್ಳೆಯವಳಾಗಿಯೇ ಸಾಯುತ್ತೇನೆ...' ಈ ಮಾತಿನ ಹಿನ್ನೆಲೆಯಲ್ಲಿ ಅವಳು ಗಂಡನೊಂದಿಗೆ ಇದ್ದಾಗ ಅನುಭವಿಸಿದ ಘೋರ ಮಾನಸಿಕ ಹಿಂಸೆಯ ಚಿತ್ರ ಧ್ವನಿತವಾಗುತ್ತದೆ. ತನ್ನ ಮೇಲೆ ಪುರುಷ ದಬ್ಬಾಳಿಕೆ ನಡೆದಾಗ ಅದನ್ನು ಪ್ರತಿಭಟಿಸಿ ನಿಲ್ಲುವ ಛಲಗಾರಿಕೆಯನ್ನು ಸುನಂದ ವಿಚ್ಛೇದನ ಪಡೆಯುವುದರ ಮೂಲಕ ಪ್ರಕಟಪಡಿಸಿದ್ದಾಳೆ. ಒಂದು ಸಮಯ ಸುನಂದ ಆಧುನಿಕ ಪ್ರಜ್ಞೆಯ, ಛಲಗಾತಿಯ ಹೆಣ್ಣಾಗದೇ 'ಪತಿಯೇ ಪರದೈವ' ಎಂಬ ಸಾಂಪ್ರದಾಯಿಕತೆಯಲ್ಲೇ ಮುಳುಗಿ ಹೋಗಿದ್ದರೆ ಏನಾಗಬಹುದಿತ್ತು ? ಇದಕ್ಕೆ ಓದುಗರೇ ಉತ್ತರ ಹೇಳಬೇಕಾಗಿದೆ.

ಹೀಗೆ, ನಿರಂಜನರ ಸಾಮಾಜಿಕ ಕಾದಂಬರಿಗಳನ್ನು ವಿವೇಚಿಸಿದಾಗ, ಅವುಗಳಲ್ಲಿ ಪಡಿಮೂಡಿ ಬಂದಿರುವ ಮಧ್ಯಮ ಹಾಗೂ ಕೆಳಮಧ್ಯಮ ವರ್ಗಗಳ ಸಮಸ್ಯೆಗಳು ಇಡಿಯಾಗಿ ಆಧುನಿಕ ಜೀವನದ ಪ್ರತೀಕಗಳಾಗಿದೆ ಎನ್ನಬಹುದು. ಅದು 'ರಂಗಮ್ಮನ ವಠಾರ'ದ ಇತಿಮಿತಿ ಬದುಕಿನ ಸಂಸಾರಗಳಾಗಿರಬಹುದು; 'ದೀಕ್ಷೆ'ಯ ಆದರ್ಶ ಯುವ ಪತ್ರಕರ್ತನ ಜೀವನವಾಗಿರಬಹುದು; 'ದೂರದ ನಕ್ಷತ್ರ'ದ ಆದರ್ಶ ಉಪಾಧ್ಯಾಯ ಜಯದೇವನಾಗಿರ

ಬಹುದು; ಇಲ್ಲವೆ 'ಪಾಲಿಗೆ ಬಂದದ್ದು ಪಂಚಾಮೃತ' ಎಂದು ಸ್ವೀಕರಿಸಿ, ಅನಂತರ ಏಕಾಂಗಿನಿಯಾಗಿ ನಿಂತು ತನ್ನ ಸ್ವತಂತ್ರವನ್ನು ಕಾಪಾಡಿಕೊಳ್ಳುವ ಸುನಂದಳಾಗಿರಬಹುದು. ಇಲ್ಲೆಲ್ಲ ಪ್ರವಹಿಸುವುದು ಆಧುನಿಕ ಬದುಕಿನ ಸಂವೇದನೆಗಳೆಂದು ನಾವು ನಿಸ್ಸಂಕೋಚವಾಗಿ ಒಪ್ಪಿಕೊಳ್ಳಬಹುದೆಂದು ತೋರುತ್ತದೆ. ಆ ಮೂಲಕ ಕಾದಂಬರಿಕಾರರು ಬದಲಾಗುತ್ತಿರುವ ತಮ್ಮ ಸಮಕಾಲೀನ ಮಧ್ಯಮ ವರ್ಗ ಸಮಾಜದ ಸ್ವರೂಪಗಳನ್ನು ಹಿಡಿದಿಡಲು ಪ್ರಯತ್ನಿಸಿದ್ದಾರೆ. ಅವುಗಳಲ್ಲಿ ಕೆಲವನ್ನಾದರೂ ಸ್ಥೂಲವಾಗಿ ಹಿಡಿದಿಡುವ ಒಂದು ಕಿರುಪ್ರಯತ್ನವನ್ನು ಈ ಲೇಖನದಲ್ಲಿ ನಾನು ಮಾಡಿದ್ದೇನೆ.

# ನಿರಂಜನರ ಚಾರಿತ್ರಿಕ ಕಾದಂಬರಿಗಳಲ್ಲಿ ಸಮಕಾಲೀನ ಆಶಯಗಳು

—ಚಿ. ಶ್ರೀನಿವಾಸರಾಜು

ಹಲವು ನೂರು ವರ್ಷಗಳ ಹಿಂದೆ ನಡೆದ ಸಂಗತಿಗಳನ್ನು ಕುರಿತು ಕೆಲವು ದಶಕಗಳ ಹಿಂದೆ ಬರೆದ ಚಾರಿತ್ರಕ ಕಾದಂಬರಿಗಳಲ್ಲಿ ಇಂದಿಗೆ ಸಮಕಾಲೀನವಾದ ಆಶಯಗಳನ್ನು ಅರಸುವುದು, ಬೆಲೆ ಕಟ್ಟುವುದು ಎಂದರೆ ವಾಸ್ತವವಾಗಿ ಆ ಕಾದಂಬರಿಗಳ ತಾಳಿಕೆ-ಬಾಳಿಕೆಗಳನ್ನು ಗುರುತಿಸುವ ಕೆಲಸವೂ ಆಗುತ್ತದೆ. ಇಂದು ಸಮಕಾಲೀನವೆನಿಸಬಹುದಾದ ಹಲವು ಸಾಹಿತ್ಯಕ ಸಮಸ್ಯೆಗಳನ್ನು ಮತ್ತು ಆ ಸಮಸ್ಯೆಗಳಿಗೆ ಕಾರಣವಾದ ಸಾಮಾಜಿಕ ಒತ್ತಡಗಳನ್ನು ಹಿಂದಿನ ಬರಹಗಾರರು ಬೀಜ ರೂಪದಲ್ಲಿಯಾದರೂ ಅನುಭವಿಸಿ, ತಮ್ಮ ತಮ್ಮ ಮಿತಿಗಳೊಳಗೆ ತಮ್ಮದೇ ಆದ ಪರಿಹಾರವನ್ನು ಕಂಡುಕೊಂಡಿರುತ್ತಾರೆ. ಅದರಲ್ಲೂ ಪ್ರಗತಿಶೀಲ ಚಳುವಳಿಗೂ ಇಂದಿನ ದಲಿತ-ಬಂಡಾಯ ಸ್ವರೂಪಕ್ಕೂ ಇರುವ ಸಾಮ್ಯ ವೈಷಮ್ಯಗಳ ದೃಷ್ಟಿಯಿಂದ ನಿರಂಜನರ ಬರವಣಿಗೆಯ ಕೆಲವು ಲಕ್ಷಣಗಳ ಪರಿಶೀಲನೆ ಮಹತ್ವಪೂರ್ಣವಾಗುತ್ತದೆ. ಸಮಕಾಲೀನತೆಯನ್ನು ಒಳಗೊಳ್ಳುವ ದೃಷ್ಟಿಯಲ್ಲಿ ನಿರಂಜನರ ಇತರ ಪ್ರಗತಿಶೀಲ ಕಾದಂಬರಿಕಾರರಿಂದ ಮಾತ್ರವಲ್ಲ ಇಂದಿನ ಪ್ರಗತಿಪರ ಲೇಖಕರಿಗಿಂತಲೂ ಭಿನ್ನವಾಗುತ್ತಾರೆ. ಈ ವಿಭಿನ್ನತೆಗಳು ಅನುಭವ, ವಸ್ತು, ನಿರೂಪಣಾ ವಿಧಾನ, ಭಾಷೆಯ ಬಳಕೆ ಮುಂತಾದ ಅಂಶಗಳನ್ನು ಗಮನಿಸಬೇಕಾಗುತ್ತದೆ. ಏಕೆಂದರೆ ನಿರಂಜನರ ಚಾರಿತ್ರಿಕ ಕಾದಂಬರಿಗಳು ಕೂಡ ಚಾರಿತ್ರಿಕತೆಯ ಮುಖವಾಡಗಳನ್ನು ಧರಿಸಿದ ಸಾಮಾಜಿಕ ಕಾದಂಬರಿಗಳೇ ಆಗಿವೆ.

ಸಾಹಿತಿಗಳ ಮತ್ತು ಚಾರಿತ್ರಿಕ ಸಂಬಂಧ ಸಾಕಷ್ಟು ಪುರಾತನವಾದುದು ಮತ್ತು ವ್ಯಾಪಕವಾದುದು. ಸಾಹಿತಿಯಾದವನು ಚರಿತ್ರೆಯನ್ನು ಬಳಸುವ ರೀತಿ ಅವನ ಉದ್ದೇಶಗಳನ್ನು ಅವಲಂಬಿಸಿರುತ್ತದೆ.

ಕನ್ನಡದ ಸಂದರ್ಭದಲ್ಲಿ ಚಾರಿತ್ರಿಕ ವಸ್ತುವನ್ನು ಉಪಯೋಗಿಸಿ ಕೊಂಡು ನೂರು ಸಣ್ಣ, ದೊಡ್ಡ ಕೃತಿಗಳು ಬಂದಿವೆ. ಆದರೂ ನಮ್ಮ ಬರಹಗಾರರು ಚಾರಿತ್ರಿಕ ಅಧ್ಯಯನ ಮತ್ತು ಸಂಶೋಧನೆಗಳಿಗಿಂತ ಕಲ್ಪನೆಗೆ ಹೆಚ್ಚಿನ ಮಹತ್ವವನ್ನು ಕೊಟ್ಟಿದ್ದಾರೆ. ಆದ್ದರಿಂದಲೇ ನಮ್ಮಲ್ಲಿ Agony and Ecstacy (Irving Stone), The Robe (Loyd Douglesr), War and Peace (Tolstoy) ಅಂತಹ ಕೃತಿಗಳು ಬಂದಿಲ್ಲ.

ಚರಿತ್ರೆಯೊಂದಿಗೆ ಸಾಹಿತ್ಯವು ಹೊಂದಿರುವ ಅಂತರ್ ಸಂಬಂಧವನ್ನು ಕುರಿತಂತೆ ಕನ್ನಡದಲ್ಲಿ ಆಗಿರುವ ಕೆಲಸ ತಕ್ಕಮಟ್ಟಿಗೆ ಗಾತ್ರಬಾಹುಳ್ಯವಿದೆ. ಆದರೆ ಅದಕ್ಕೆ ಇನ್ನಷ್ಟು ನಿಖರತೆ, ವೈಜ್ಞಾನಿಕತೆ ಮತ್ತು ಪಾಂಡಿತ್ಯಗಳು ಪ್ರಾಪ್ತವಾಗಬೇಕು.

ಅ.ನ.ಕೃ., ತ.ರಾ.ಸು., ಬಸವರಾಜ ಕಟ್ಟೀಮನಿ ಹಾಗೂ ನಿರಂಜನ ಪ್ರಗತಿಶೀಲ ಚಳುವಳಿಯ ಸಂದರ್ಭದಲ್ಲಿ ಮುಖ್ಯ ಬರಹಗಾರರು. ನಿರಂಜನರ ಕಾದಂಬರಿಗಳಿಗೆ ಅ.ನ.ಕೃ. ಅನುಕರಣೀಯ ಮಾದರಿಯಲ್ಲ. ನಿರಂಜನರು ಮೊದಲಿನಿಂದಲೂ ಬೆಳೆಸಿಕೊಂಡು ಬಂದ ಎಚ್ಚರ, ಏಕಾಂಗಿತನ ಅವರನ್ನು ಪ್ರಗತಿಶೀಲರ ನಡುವೆ ವಿಶಿಷ್ಟರಾಗಲು ಕಾರಣವಾಯಿತು. ಅ.ನ.ಕೃ., ತ.ರಾ.ಸು. ಅವರುಗಳದು ಆಸ್ತಿಕ ಮನೋಧರ್ಮದ ನೆಲೆ, ನಿರಂಜನರದು ನಾಸ್ತಿಕ ಮನೋಧರ್ಮದ ನೆಲೆ. ಅವರ ಯಾವ ಬರಹದಲ್ಲಿಯೂ ದೇವರು, ಧರ್ಮ, ಜಾತಿಗಳು ಮಾನವೀಯ ಸಂಬಂಧಗಳಿಗಿಂತ ಮುಖ್ಯವಾಗುವುದಿಲ್ಲ. ಪ್ರಗತಿಶೀಲರು ನವೋದಯದ ಹಿನ್ನೆಲೆಯಲ್ಲಿ ಮೂಡಿಬಂದವರು. ಸ್ವಾತಂತ್ರ್ಯ ಚಳುವಳಿಯ ಆದರ್ಶದ ಕನಸುಗಾರಿಕೆ, ಪ್ರಾದೇಶಿಕ ಭಾಷೆಯ ಅಭಿಮಾನ ಬೆಳೆದು ಬಂದದ್ದರಿಂದ ವೈಚಾರಿಕತೆಯ ಅಂಶ ಕೊಂಚಮಟ್ಟಿಗೆ ಗೌಣವಾಯಿತು. ಅಲ್ಲದೆ ಇವರೆಲ್ಲಾ ಬರಹವನ್ನೇ ತಮ್ಮ ಜೀವನೋ

ಪಾಯಃಕ್ಕೆ ಅವಲಂಬಿಸಿದ್ದರಿಂದ ಜನಪ್ರಿಯತೆಯು ಜಾಡಿನಲ್ಲಿ ಬಿದ್ದಿದ್ದರಿಂದ ಸಾಹಿತ್ರಿಕ ಗುಣ ಕ್ರಮೇಣ ಕಡಿಮೆಯಾಗಿ 'ಪ್ರಗತಿಶೀಲತೆ' ವೇದಿಕೆಗಳಿಗೆ ಮಾತ್ರ ಸೀಮಿತವಾಯಿತು. ಈ ಎಲ್ಲ ತೊಡರುಗಳನ್ನು ಎದುರಿಸಿಯೂ, ತಮ್ಮ ಪ್ರಗತಿಶೀಲ ಧೋರಣೆಗಳಿಗೆ ತಕ್ಕಮಟ್ಟಿಗೆ ವೈಚಾರಿಕ ಹಿನ್ನೆಲೆಯನ್ನು ರೂಪಿಸಿ, ಕೊನೆಯವರೆಗೂ ಆತ್ಮಪ್ರತ್ಯಯವನ್ನು ಕಾಪಾಡಿಕೊಂಡು ಬಂದವರು ನಾಸ್ತಿಕವಾದಿ ಬರಹಗಾರರಾದ ನಿರಂಜನರು ಮಾತ್ರ. ಆದರೆ ನಿರಂಜನರ ಬದ್ಧ ಬರವಣಿಗೆಯ ನಿಲುವು ಕಾಲಕಾಲಕ್ಕೆ ಬದಲಾಗಿರುವುದನ್ನೂ ಗುರುತಿಸಬಹುದು.

ನಿರಂಜನರ ಸಾಹಿತ್ಯದ ಕೇಂದ್ರ, ಮನುಷ್ಯ. ಮನುಷ್ಯನೇ ಪರಮ ಸತ್ಯ ಎನ್ನುವುದನ್ನು ನಿರಂಜನರು ಬದುಕಿನಲ್ಲಿ, ಸಾಹಿತ್ಯ ರಚನೆಯಲ್ಲಿ ಕಂಡು ಕೊಂಡರು. ಸಾಹಿತ್ಯದ ಭಾವನಾತ್ಮಕ ಪ್ರಪಂಚದಲ್ಲಿ ಮರೆಯಾಗಿ ಹೋಗಿದ್ದ ಮನುಷ್ಯನನ್ನು ಅನಾವರಣಗೊಳಿಸಿ, ಬದುಕಿಗೆ ಚಿಂತನಶೀಲತೆಯನ್ನು ಕೊಡುವ ಸವಾಲನ್ನು ಸ್ವೀಕರಿಸಿದರು, ಇದಕ್ಕಾಗಿ ಅವರು ಮನುಷ್ಯನ ಮತ್ತು ಚರಿತ್ರೆಯ ಆಳವಾದ ಶೋಧನೆಗೆ ಕೈಹಾಕಿದರು. ಈ ದೃಢ ವಿಶ್ವಾಸದ ಮೂಲಕ ತನ್ನನ್ನು ತಾನು ರೂಪಿಸಿಕೊಳ್ಳುತ್ತಾ ದಾಪುಗಾಲು ಹಾಕುವುದನ್ನು 'ಚಿರಸ್ಮರಣೆ'ಯಿಂದ 'ಮೃತ್ಯುಂಜಯ'ದ ವರೆಗೆ ಕಾಣಬಹುದು. ಈ ದೃಷ್ಟಿಯಿಂದ ನಿರಂಜನರದು ಕನ್ನಡ ಸಾಹಿತ್ಯದಲ್ಲಿ ಒಂಟಿ ಧ್ವನಿ.

ಕಥಾ ಸಾಹಿತ್ಯ ಚರಿತ್ರೆಯನ್ನು ಅರಗಿಸಿಕೊಳ್ಳುವ, ಅದನ್ನು ತನ್ನ ಕಕ್ಷೆಯೊಳಗೆ ತುಂಬಿಕೊಳ್ಳುವ ಕ್ರಮದಲ್ಲಿ ವ್ಯತ್ಯಾಸಗಳಿವೆ.

ನಿರಂಜನರು 'ಕಲ್ಯಾಣ ಸ್ವಾಮಿ' (೧೯೫೬) ಮತ್ತು 'ಸ್ವಾಮಿ ಅಪರಂಪಾರ' (೧೯೬೫) ಬರೆಯುವ ಸಂದರ್ಭದಲ್ಲಿ ಅವರು ಆ ಕಾಲದ ಬದುಕನ್ನು ಸಾಮಗ್ರಿಯಾಗಿ ಬಳಸಿಕೊಂಡರು. ಈ ರೀತಿಯ ರಚನೆಗಳ ಹಿನ್ನೆಲೆಯಲ್ಲಿ ಮಾನವ ಜೀವನವನ್ನು ನಿಯಂತ್ರಿಸುವ ಶಕ್ತಿಗಳು ಯಾವುವು ? ಎಂಬ ಜೀವಂತ ಪ್ರಶ್ನೆಗೆ ಉತ್ತರವನ್ನು ಅರಸಲು ಪ್ರಯತ್ನಿಸಿದರು. ಇದರಿಂದ ಇವರ ಕಾದಂಬರಿಗಳಲ್ಲಿ "ಸಾಮಾಜಿಕ ಪ್ರವಾದಿ"ಯ ಹೊಸಧ್ವನಿ

ಕೇಳಿಸಿತು. ನಿರಂಜನರ ಕೃತಿಗಳಲ್ಲಿ ಒಂದು ಬಗೆಯ 'ದಾವಂತ' ಗುಣ ಕಂಡು ಬರುತ್ತದೆ. ಅದು ಬಿಟ್ಟಬಾಣದಂತೆ ಮನುಷ್ಯನನ್ನೇ ತಲುಪುತ್ತದೆ. ಆದ್ದರಿಂದ ಅವರ ಬರವಣಿಗೆಯಲ್ಲಿ ಆತುರ, ಸಂಭ್ರಮ ಮತ್ತು ಪ್ರೀತಿ ಕಂಡು ಬರುತ್ತದೆ.

ಚಾರಿತ್ರಿಕ ಕೃತಿಗಳ ಪರಿಶೀಲನೆಯ ಸಂದರ್ಭದಲ್ಲಿ ಸಾಹಿತ್ಯಿಕ ಗುಣವೇ ಮುಖ್ಯವಾದರೂ ಚಾರಿತ್ರಿಕ ಚಿಂತನೆಯ ಸ್ವರೂಪವನ್ನು ಪರಿಗಣಿಸಬೇಕಾಗುತ್ತದೆ. ಒಂದು ಸಾಹಿತ್ಯ ಕೃತಿಯಲ್ಲಿ ಚಾರಿತ್ರಿಕ ಚಿಂತನೆಯ ಪರಿಕಲ್ಪನೆಯು ಎಷ್ಟರಮಟ್ಟಿಗೆ ಅಡಗಿರುವುದೆಂಬುದನ್ನು ನಿರಂಜನರ ನಾಲ್ಕು ಚಾರಿತ್ರಿಕ ಕಾದಂಬರಿಗಳ ಹಿನ್ನೆಲೆಯಲ್ಲಿ ಕಾಣಬಹುದು :

ಅ) ಚರಿತ್ರೆ ಕೃತಿಕಾರನಿಗೆ ಸಿದ್ಧವಸ್ತುವನ್ನು, ಚೌಕಟ್ಟನ್ನು ಒದಗಿಸುತ್ತದೆ. ಇಲ್ಲಿ ಚಾರಿತ್ರಿಕ ಪ್ರಮುಖ ವ್ಯಕ್ತಿಗಳೇ ಮುಖ್ಯರಾಗುತ್ತಾರೆ.

ಆ) ಕೃತಿಯಲ್ಲಿನ ಚಾರಿತ್ರಿಕ ವ್ಯಕ್ತಿಗಳಿಗಿಂತ ಮಿಗಿಲಾಗಿ 'ಚಾರಿತ್ರಿಕ ಚಲನೆ' ಬಗ್ಗೆ ಗಂಭೀರ ಚಿಂತನೆ ಕಂಡುಬರುತ್ತದೆ.

ಇ) ಕೃತಿಕಾರನು ತನ್ನ ಪೂರ್ವ ನಿಶ್ಚಿತ ಸಿದ್ಧಾಂತಗಳಿಗೆ ಅಥವಾ ತತ್ತ್ವಗಳಿಗೆ ನಿದರ್ಶನವನ್ನಾಗಿ ಚರಿತ್ರೆಯನ್ನು ತನ್ನ ಕೃತಿಗಳಲ್ಲಿ ವ್ಯಾಖ್ಯಾನಿಸಬಹುದು.

ಓರ್ವ ಸೃಜನಶೀಲ ಬರಹಗಾರ ಇದೆಲ್ಲಾ ದೃಷ್ಟಿಕೋನಗಳಿಗಿಂತ ಭಿನ್ನವಾಗಿಯೂ ಚರಿತ್ರೆಯನ್ನು ನೋಡಬಹುದು. ಚರಿತ್ರೆಯೆಂದರೆ ಸಾಮಾನ್ಯ ಜನರ, ಅವರನ್ನೊಳಗೊಂಡ ಸಮಾಜದ ಟೊಳ್ಳು-ಗಟ್ಟಿಗಳ ಸಮೀಕ್ಷೆ. ಈ ರೀತಿಯ ಚಾರಿತ್ರಿಕ ಪ್ರಜ್ಞೆಯುಳ್ಳ ಬರಹಗಾರನ ಕೃತಿಗಳಲ್ಲಿ ರಾಜ-ರಾಣಿಯರು, ಅಧಿಕಾರಿಗಳು ಕಂಡು ಬಂದರೂ ಒತ್ತು ಬೀಳುವುದು ಮುಖ್ಯವಾಗಿ ಆಂದಿನ ಸಮಾಜದ ರಚನೆಯ ಮೇಲೆ. ನಿರಂಜನರ ಯಶಸ್ವಿ ಚಾರಿತ್ರಿಕ ಕಾದಂಬರಿಗಳಲ್ಲಿ ಕಂಡುಬರುವುದು ಈ ಬಗೆಯ ಚಾರಿತ್ರಿಕ ಪ್ರಜ್ಞೆ. ಅವರು

**ಚಿರಸ್ಮರಣೆ (೧೯೫೩)**

**ಕಲ್ಯಾಣಸ್ವಾಮಿ (೧೯೫೭)**

ಸ್ವಾಮಿ ಅಪರಂಪಾರ (೧೯೬೫)

ಮೃತ್ಯುಂಜಯ (೧೯೭೬)

ಈ ನಾಲ್ಕು ಕಾದಂಬರಿಗಳಲ್ಲಿ ಅನೇಕ ಸಾಮ್ಯಗಳಿವೆ.

೧. ಕೃತಿಯನ್ನು ಪೂರ್ಣವಾಗಿ ಆವರಿಸಿಕೊಂಡು, ವ್ಯವಸ್ಥೆಯ ವಿರುದ್ಧ ನಡೆಸುವ ನಿರಂತರ ಹೋರಾಟ ನಾಲ್ಕೂ ಕಾದಂಬರಿಗಳಲ್ಲಿ ಕಂಡು ಬರುತ್ತದೆ.

೨. ರಾಜಮಹಾರಾಜರಿಗಿಂತ ಸಾಮಾನ್ಯ ಜನರ ಚಲನಶೀಲತೆಯನ್ನು ಗುರುತಿಸಬಹುದು. ಚರಿತ್ರೆಯನ್ನು 'ಅಥೆಂಟಿಸಿಟಿ'ಗಾಗಿ ಮಾತ್ರ ಬಳಸಿಕೊಳ್ಳುತ್ತಾರೆ.

೩. ಮನುಷ್ಯ ಪ್ರೇಮ ಅಥವಾ ಮಾನವೀಯ ಅಂತಃಕರಣ ನಿರಂಜನರ ಎಲ್ಲ ಕೃತಿಗಳಲ್ಲಿ ಎದ್ದು ಕಾಣುವ ಗುಣ.

೪. ನಿರಂಜನರು ನೀತಿ ನಿಯಮಗಳ (Morality) ಸ್ಥಾಪನೆಗೆ ನಡೆಸುವ ಶೋಧಕ ದೃಷ್ಟಿ ಕಂಡು ಬರುತ್ತದೆ. ಇಲ್ಲಿ ಕಾದಂಬರಿಯ ಕಥಾವಸ್ತು ಮತ್ತು ಪಾತ್ರಗಳು ಒಂದು ಪೂರ್ವನಿಶ್ಚಿತ ಚೌಕಟ್ಟಿನಲ್ಲಿ ಮಾತ್ರ ಅರಳುತ್ತವೆ. ಪಾತ್ರಗಳಲ್ಲಿ ಸ್ವಯಂ ವಿಕಾಸ ಕಂಡು ಬರುವುದಿಲ್ಲ. ಆದ್ದರಿಂದ ಈ ಕಾದಂಬರಿಗಳಲ್ಲಿ ಪಾತ್ರಗಳು ಮುಖ್ಯವಾಗುವುದಿಲ್ಲ.

ನಿರಂಜನರ ಚಾರಿತ್ರಿಕ ಕಾದಂಬರಿಗಳಲ್ಲಿ 'ಕಲ್ಯಾಣಸ್ವಾಮಿ' ಮತ್ತು 'ಸ್ವಾಮಿ ಅಪರಂಪಾರ' ಒಂದೇ ಕಥಾವಸ್ತುವನ್ನು ಒಳಗೊಂಡಿವೆ. ಎರಡರ ರಚನಾಶೈಲಿ ಕೂಡ ಒಂದೇ ಬಗೆಯದಾಗಿದೆ. 'ಚಿರಸ್ಮರಣೆ' ಮತ್ತು 'ಮೃತ್ಯುಂಜಯ' ಕಾದಂಬರಿಗಳ ಕಾಲಖಂಡದ ಅಂತರ. ರಚನಾ ವಿಧಾನ ಭಿನ್ನವಾಗಿದೆ. ಆದರೆ ಈ ಎಲ್ಲಾ ಕೃತಿಗಳಲ್ಲಿ ಕಂಡು ಬರುವುದು ಎರಡೇ ವರ್ಗಗಳು. ದುಡಿಯುವವರು ಮತ್ತು ದುಡಿಸಿಕೊಳ್ಳುವವರು ಎಂಬುದನ್ನು ಸೂಚಿಸುತ್ತವೆ. 'ಕಲ್ಯಾಣಸ್ವಾಮಿ' ಮತ್ತು 'ಸ್ವಾಮಿ ಅಪರಂಪಾರ'ದ ಚಾರಿತ್ರಿಕತೆ ಏನೇ ಇರಲಿ, ಸಾಹಿತ್ಯಿಕ ದೃಷ್ಟಿಯಿಂದ ಇವನ್ನು ನೋಡಿದಾಗ ಎದ್ದು ಕಾಣುವ ಅಂಶವೆಂದರೆ ಚರಿತ್ರೆಯ ಸರಳೀಕರಣ. ವರ್ಗ ವಿನ್ಯಾಸದ

ಜೊತೆಗೆ ವರ್ಣ ವಿನ್ಯಾಸದ ಸೂಕ್ಷ್ಮಾತಿಸೂಕ್ಷ್ಮ ಭಿನ್ನತೆ ಮತ್ತು ಸಂಕೀರ್ಣತೆಯ ಬದಲು ನಾವು ಕಾಣುವುದು ಕಪ್ಪು-ಬಿಳುಪಿನ ಸಮಾಜ.

"ಆಳುವವರು ಯಾವ ರೀತಿಯಲ್ಲೂ ಒಳ್ಳೆಯವರಾಗಲು ಸಾಧ್ಯವಿಲ್ಲ ಮತ್ತು ಆಳಿಸಿಕೊಳ್ಳುವವರು ಎಚ್ಚರಗೊಂಡಾಗ ಅವರನ್ನು ಮೋಸದಿಂದಲೇ ವಿನಹ ಬೇರೆ ಯಾವ ರೀತಿಯಲ್ಲೂ ಮಣಿಸಲಾಗುವುದಿಲ್ಲ"–ಈ ವಿಚಾರಸರಣಿ ಅವರ ಚಾರಿತ್ರಿಕ ಕಾದಂಬರಿಗಳ ಹಿನ್ನೆಲೆಯಲ್ಲಿದೆ. ಅಪ್ಪು, ಚಿರಕುಂಡ. ಕಲ್ಯಾಣ ಸ್ವಾಮಿ. ಅಪರಂಪಾರ. ಮೇನಪಟಾ ಉದಾತ್ತ ವ್ಯಕ್ತಿಗಳಾಗಿ ಬಿಡುತ್ತಾರೆ. ಅವರ ಸಂಗಡಿಗರಿಗೆ ಯಾರಿಗೂ ಒಂದೇ ಒಂದು ಕ್ಷಣದಲ್ಲಿಯೂ (ಕುಡಿಯ, ನಂಜಯ್ಯ, ಮಾಚಯ್ಯ, ರಾಮೇಗೌಡ) ಮಾನವ ಸಹಜವಾದ ವಿಕಾರಗಳಾಗಲಿ, ಭೀತಿ–ಅಸೂಯೆಗಳಾಗಲಿ ಇಲ್ಲ. ಪರಸ್ಪರ ಗುರುತು ಪರಿಚಯವಿಲ್ಲದಿದ್ದರೂ ನೋಡಿದ ಕ್ಷಣದಲ್ಲೇ ಅವರೆಲ್ಲಾ ಗಾಢ ಮಿತ್ರರಾಗುತ್ತಾರೆ. ಜಾತಿ-ಮತ ಕುಲಭೇದಗಳನ್ನು ಮರೆತು ಇವರ **ಕರೆಗೆ** ಓಗೊಟ್ಟು, ಅದಕ್ಕೇ ಕಾಯುತ್ತಿದ್ದರೆಂಬಂತೆ ಹಳ್ಳಿ ಹಳ್ಳಿಗಳೆಲ್ಲೆಲ್ಲಾ ಅಸಂಖ್ಯಾತ ಜನರು ಇವರನ್ನು ಸೇರುತ್ತಾರೆ. ಸ್ತ್ರೀಯರೆಲ್ಲಾ ಸಂತೋಷದಿಂದ ಇವರಿಗೆ ಬುತ್ತಿ ಕಟ್ಟಿಕೊಟ್ಟು ಯುದ್ಧಕ್ಕೆ ಕಳುಹಿಸುತ್ತಾರೆ. ಇಷ್ಟೆಲ್ಲಾ ಅಪ್ರತಿಮ ವೀರರಿದ್ದು ರಾಮೇಗೌಡನಂತಹ ಸಮರ ಕುಶಲನಿದ್ದೂ ಒಂದೇ ರಾತ್ರಿಯಲ್ಲಿ ಅತಿ ಸುಲಭವಾಗಿ ಇವರೆಲ್ಲಾ ಬ್ರಿಟೀಷರಿಗೆ ಏನೂ ಹೋರಾಟವಿಲ್ಲದೆ ಸೆರೆ ಸಿಕ್ಕುತ್ತಾರೆ.

ಕಲ್ಯಾಣಸ್ವಾಮಿ ಮತ್ತು ಸ್ವಾಮಿ ಅಪರಂಪಾರರ ವೀರ ಸಂಗ್ರಾಮವನ್ನು ಹತ್ತಿಕ್ಕುವುದು ಹೇಗೆ ಸಾಧ್ಯವಾಯಿತು ? ಉತ್ತರ ಸುಲಭ. ನಮ್ಮವರ ವಿಶ್ವಾಸ ದ್ರೋಹ ಮತ್ತು ಮೋಸ. 'ಕಲ್ಯಾಣಸ್ವಾಮಿ' ಮತ್ತು 'ಸ್ವಾಮಿ ಅಪರಂಪಾರ' ಇವೆರಡೂ ಕೃತಿಗಳಲ್ಲಿನ ಖಳನಾಯಕ ಜೋಪ್ರಬಮಾನ. ಪ್ರತಿಯೊಂದು ದುರ್ಘಟನೆಯಲ್ಲೂ ಅವನ ಕೈವಾಡವಿದೆ. ಈ ಕಾದಂಬರಿಗಳಲ್ಲಿನ ಭಾಷೆಯೂ ಭಾವೋನ್ಮಾದದಿಂದ ಓಡುತ್ತದೆ. ಕರುಣಾರಸ. ವೀರ ರಸಗಳು ಮೆರೆದಾಡುತ್ತವೆ.

ಸಾಹಿತ್ಯ ಕೃತಿಗಳು ಕಾಲನ ಜರಡಿಯಲ್ಲಿ ಹಾದು ಬಂದಾಗ, ಬೇರೆ ಬೇರೆ ಕಾಲ ಖಂಡಗಳಲ್ಲಿ ರಚಿತವಾದ ಕೃತಿಗಳನ್ನು ಏಕಕಾಲದಲ್ಲಿ ಓದುವ ಅವಕಾಶ

ಪಡೆಯುವುದರಿಂದ, ಕೃತಿ ರಚನೆಯ ಕಾಲದ ಚಾರಿತ್ರಿಕ ಸಂದರ್ಭಕ್ಕಿಂತ ಆ ಕೃತಿಯ ಸಾಹಿತ್ಯ ಮೌಲ್ಯವೇ ಮುಖ್ಯವಾಗುತ್ತದೆ. ಆದ್ದರಿಂದ ಬರಹಗಾರನೊಬ್ಬ ತನ್ನ ರಚನೆಯ ಪ್ರಕಾರದಲ್ಲಿ ಆಗುತ್ತಿರುವ ಬೆಳವಣಿಗೆ ಮತ್ತು ಆವಿಷ್ಕಾರಗಳನ್ನು ಎಚ್ಚರದಿಂದ ಗಮನಿಸಿ, ಅವನ್ನು ತನ್ನ ಬರವಣಿಗೆಯಲ್ಲಿ ಪ್ರತಿಸ್ಪಂದಿಸಬೇಕಾಗುತ್ತದೆ.

ನಿರಂಜನರ ಕಾದಂಬರಿಗಳಲ್ಲಿ,

೧) ಮುಖ್ಯವಾಗುವುದು ಪಾತ್ರದ ಅಂತರಂಗದಲ್ಲಿ ನಡೆಯಬಹುದಾದ ತುಮುಲದ ವಾಸ್ತವತೆಯಲ್ಲ, ಸಾಮಾಜಿಕ ಸನ್ನಿವೇಶದಲ್ಲಿ ತನ್ನ ವರ್ತನೆಯ ಮೂಲಕವೇ ನಿಜವಾಗುವ ಬಾಹ್ಯದ ವಾಸ್ತವತೆ. ಚಿರಕುಂಡ, ನಂಬೂದಿರಿ, ನಂಬಿಯಾರ್, ಕಲ್ಯಾಣಸ್ವಾಮಿ, ಅಪರಂಪಾರ, ಬೋಪು ದಿವಾನ, ಅರ್ಚಕ ಹೇಪಾಟ್, ಮೆನಪಟಾ, ನೆಫರ್‌ಟೀಮ್ ಮುಂತಾದವರು ನಿರ್ದಿಷ್ಟ ಸಿದ್ಧಪಾತ್ರಗಳಾಗಿ ಸಮರ್ಥವಾಗಿಯೇ ಪ್ರತಿನಿಧಿಸುತ್ತಾರೆ.

೨) ನಿರಂಜನರ ಸೃಜನಶೀಲ ಪ್ರತಿಭೆ, ವಿಶಾಲ ಓದಿನ ಫಲದಿಂದ ಬಂದ ಹಲವು ಉಪಕರಣಗಳನ್ನು ಸಮರ್ಥವಾಗಿ ಬಳಸಿಕೊಂಡಿದ್ದಾರೆ, ತಾನು ಚಿತ್ರಿಸುತ್ತಿರುವ ಸನ್ನಿವೇಶದಲ್ಲಿ ತಲ್ಲೀನರಾಗಿ ಬರೆಯುವಾಗಲೂ, ಮನಸ್ಸನ್ನು ಆಳವಾಗಿ ತಟ್ಟುವ ಭಾವನೆಗಳಿಗೆ ರೂಪು ಕೊಡುತ್ತಿರುವಾಗಲೂ ಬರವಣಿಗೆಯ ಮೇಲಿನ ಬೌದ್ಧಿಕ ಹಿಡಿತವನ್ನು ಸಾಮಾನ್ಯವಾಗಿ ಕಳೆದುಕೊಳ್ಳದಿರುವುದು ಮತ್ತೊಂದು ಗುಣ.

'ಚಿರಸ್ಮರಣೆ'ಯಲ್ಲಿ ಸಮಕಾಲೀನ ಚಾರಿತ್ರಿಕ ವಸ್ತುವನ್ನು ಕಾದಂಬರಿಯನ್ನಾಗಿಸಿದ ನಿರಂಜನರು 'ಮೃತ್ಯುಂಜಯ'ದಲ್ಲಿ ಕಾಲದೇಶಗಳನ್ನು ಅತಿಕ್ರಮಿಸುತ್ತಾರೆ. 'ಚಿರಸ್ಮರಣೆ', 'ಮೃತ್ಯುಂಜಯ' ಎರಡೂ ಬಂಡಾಯ ಕಾದಂಬರಿಗಳೇ ಆದರೂ 'ಚಿರಸ್ಮರಣೆ'ಯಲ್ಲಿ ಗಳಿಸಲಾಗದ ವಸ್ತುನಿಷ್ಠೆಯನ್ನು 'ಮೃತ್ಯುಂಜಯ'ದಲ್ಲಿ ಗಳಿಸಿಕೊಂಡಿದ್ದಾರೆ.

'ಚಿರಸ್ಮರಣೆ' ಉತ್ತರ ಕೇರಳದ ಪುಟ್ಟ ಗ್ರಾಮವೊಂದಾದ ಕಯ್ಯೂರಿನಲ್ಲಿ ನಡೆದ ಚಾರಿತ್ರಿಕ ಘಟನೆ. ಹದಿನಾಲ್ಕು ವರ್ಷಗಳ ಅನಂತರದ ಸಾಹಿತ್ಯ

ಕೃತಿಯ ನಿರ್ಮಾಣಕ್ಕೆ ಕಚ್ಚಾವಸ್ತುವನ್ನು ಒದಗಿಸಿದೆ. ಅಜ್ಞಾನ ಮತ್ತು ಅನಕ್ಷರತೆ ಇವುಗಳ ಕಾರಣಗಳಿಂದ ಬಡರೈತರು ತಲೆಎತ್ತಿ ನಿಲ್ಲಲು ಸಾಧ್ಯವಾಗದ ಕಾಲದಲ್ಲಿ ಕಯ್ಯೂರಿನ ಹೋರಾಟಗಾರರು ಸಂಘಟಿತರಾಗುತ್ತಾರೆ. ತಮ್ಮ ಹಕ್ಕುಗಳಿಗಾಗಿ ವ್ಯವಸ್ಥಿತ ಸಂಘಟನೆಯನ್ನು ರೂಪಿಸುತ್ತಾರೆ. ಇದನ್ನು ದತ್ತಿಕ್ಕಲು ಸಾಮ್ರಾಜ್ಯಶಾಹಿ ಶಕ್ತಿ ಅವಿರತ ಪ್ರಯತ್ನ ನಡೆಸುತ್ತದೆ. ಆದರೆ ಹೋರಾಟಗಾರರ ಫಲ ಈ ನೆಲದಲ್ಲಿ ಸಿದ್ಧಿಸುತ್ತದೆಂಬ ಅಚಲ ನಂಬಿಕೆಯಿಂದ ಸಾವಿಗೀಡಾಗುತ್ತಾರೆ.

'ಚಿರಸ್ಮರಣೆ'ಯನ್ನು ನಿರಂಜನರು ಜೀವಂತ ಪ್ರಪಂಚದಿಂದ ಆರಿಸಿ ಚಿತ್ರಿಸಿದ್ದಾರೆ. ಈ ಘಟನೆ ನಡೆದಾಗ ಅವರು ಕಯ್ಯೂರಿನ ಬಳಿಯಿರುವ ನೀಲೇಶ್ವರ ರಾಜಾಸ್ ಹೈಸ್ಕೂಲ್‌ನ ವಿದ್ಯಾರ್ಥಿಯಾಗಿದ್ದರು. ಕಯ್ಯೂರಿನ 'ಅಪರಾಧಿಗಳ' ವಿಚಾರಣೆ ಮಂಗಳೂರಿನಲ್ಲಿ ನಡೆಯುವಾಗ ನಿರಂಜನರು 'ರಾಷ್ಟ್ರಬಂಧು' ಪತ್ರಿಕಾ ಕಛೇರಿಯಲ್ಲಿ ಕೆಲಸ ಮಾಡುತ್ತಿದ್ದರು. ನಿರಂಜನ ಈ ಘಟನೆಯ ತೀರ ಹತ್ತಿರದ ನಿರೀಕ್ಷಕ.

ವಿಲ್‌ಡ್ಯುರೆಂಟ್ ತನ್ನ "our oriental heritage" ಪುಸ್ತಕದಲ್ಲಿ ಬರೆದ ಒಂದು ಸಾಲು ಬರಹ, ನಿರಂಜನರ ಕುತೂಹಲವನ್ನು ಕೆರಳಿಸಿತು. "A Greek tradition reports a great revolt in Egypt in which the slaves captured a province" ಎಂಬ ವಾಕ್ಯ ೬೯೬ ಪುಟದ ಬೃಹತ್ 'ಮೃತ್ಯುಂಜಯ' ಕಾದಂಬರಿಯಾಗಿ ಬೆಳೆಯಿತು. ಇದು ಗುಲಾಮರು ಸ್ವಾತಂತ್ರ್ಯಕ್ಕಾಗಿ ನಡೆಸಿದ ಬಂಡಾಯವನ್ನು ಮತ್ತು ಈಜಿಪ್ಟಿನ ೪.೫೦೦ ವರ್ಷಗಳ ಹಿಂದಿನ ನಾಗರೀಕತೆಯನ್ನು ಪರಿಚಯಿಸುತ್ತದೆ.

ಸಮಕಾಲೀನ ಸಮಾಜದಲ್ಲಿ ಜೀವಂತವಾಗಿರುವ ಶೋಷಣೆ, ವರ್ಗ ಕಲಹ ಮತ್ತು ದಲಿತರ ಪ್ರತಿಭಟನೆಯ ಮೂಲ ಮಾದರಿಗಳನ್ನು ಬೇರೆ ಬೇರೆ ಕಾಲಖಂಡಗಳಲ್ಲಿ ಅರಸುತ್ತಾ ಹೋಗುವುದು ನಿರಂಜನರಿಗೆ ಪ್ರಿಯವಾದ ಸಂಗತಿ. ಚಿರಸ್ಮರಣೆಯೇ ಇರಲಿ, ಮೃತ್ಯುಂಜಯವೇ ಇರಲಿ ಇವರ ಉದ್ದೇಶವು ವಾಸ್ತವವಾಗಿ ನಡೆದ ಹೋರಾಟವನ್ನು ದಾಖಲಿಸುವುದು

ಮಾತ್ರವಲ್ಲ ಶೋಷಿತರ ಸ್ಥಿತಿಗತಿಗಳ ಬಗ್ಗೆ ಓದುಗರ ಸಹಾನುಭೂತಿಯನ್ನು ಜಾಗ್ರತಗೊಳಿಸಿ, ಶೋಷಿತರ ಪರವಾದ ಹೋರಾಟದ ಕಡೆಗೆ ಸೆಳೆಯುವ ಮಹಾತ್ವಾಕಾಂಕ್ಷೆಯಿಂದ ಪ್ರೇರಿತರಾದವರು.

೪,೫೦೦ ವರ್ಷಗಳ ಹಿಂದಿನ ಬದುಕನ್ನು 'ಅಥೆಂಟಿಕ್' ಎನ್ನುವಂತೆ (ಶವಲೇಪನ, ಸೆಡ್ ಉತ್ಸವ) ಚಿತ್ರಿಸಲು ನಿರಂಜನರು ಪಟ್ಟ ಕಷ್ಟವನ್ನು ಹೀಗೆ ಹೇಳಿಕೊಂಡಿದ್ದಾರೆ.

"ಆ ಕಾಲಾವಧಿಯ ರಾಜಕೀಯ ಸಾಮಾಜಿಕ ಮತ್ತು ಆರ್ಥಿಕ ಬದುಕನ್ನು ಅರಿಯಲು ಶ್ರಮಿಸಿದೆ. ಪುರಾತತ್ತ್ವ ಶಾಸ್ತ್ರಜ್ಞನನ್ನು ಊರು ಗೋಲಾಗಿ ಬಳಸಿ, ಕಾಲದ ಅಂತರವನ್ನು ದಾಟಿ ಪ್ರಾಚೀನ ಈಜಿಪ್ಟ್‌ಗೆ ಹೋದೆ. ಗೋರಿಗಳ ನಡುವೆ ಓಡಾಟ, ಸತ್ತವರ ಸಂಗ, ನೀಲ ನದಿಯಲ್ಲಿ ದೋಣಿ ಪ್ರವಾಹ, ರೈತನಾದೆ, ಕುಶಲಕರ್ಮಿಯಾದೆ, ಲಿಪಿಕಾರನಾದೆ, ಪುರೋಹಿತನಾದೆ, ಫೆರೋ ಪಾತ್ರವನ್ನು ವಹಿಸಿದೆ. ಒಂಭತ್ತು ತಿಂಗಳ ಯತ್ನ ನಾನು ಸಿದ್ಧ ಎನ್ನಿಸಿತು."

ಈ ಮಾತುಗಳ ಪ್ರಾಮಾಣಿಕತೆಯನ್ನಾಗಲೀ, ಲೇಖಕರ ಶ್ರದ್ಧೆಯನ್ನಾಗಲಿ ನಿರಾಕರಿಸುವುದು ಸಾಧ್ಯವಿಲ್ಲ.

ಪ್ರಾಚೀನ ಕಾಲದ ಬಾಹ್ಯ ಆವರಣವನ್ನು ತೆಗೆದು ನೋಡಿದಾಗ ಇದೊಂದು ರಾಜಕೀಯ ಕಾದಂಬರಿ. ಆಳುವವರು ಮತ್ತು ಆಳಲ್ಪಟ್ಟವರ ನಡುವಿನ ಸಂಬಂಧಗಳ ಸೂಕ್ಷ್ಮ ವಿಶ್ಲೇಷಣೆ ಇದರ ವಸ್ತು. ಆದರೆ ರಾಜಕೀಯ ಕಾದಂಬರಿಯು ಒಂದು 'ಸಾಹಿತ್ಯ ಪ್ರಕಾರ'ವಾಗಿ ತನ್ನದೇ ಆದ ವಿಕಾಸಕ್ರಮವನ್ನು ಈಗಾಗಲೇ ಹೊಂದಿದೆ. Animal Form, 1984 (George orwell), The Lord of Flies (William Golding) Dr. Zhivago (Boris Pasternak) ಮುಂತಾದ ಕೃತಿಗಳು, ಅಧಿಕಾರದಾಹ, ಶೋಷಿತ ನಿರಲಿ, ಶೋಷಕನಿರಲಿ, ಅಧಿಕಾರ ದೊರೆತಾಗ ಶೋಷಿತನೇ ಶೋಷಕನಾಗಿ ಪರಿವರ್ತನೆ ಹೊಂದುವ ಸೋಜಿಗ ಇತ್ಯಾದಿಗಳನ್ನು ತುಂಬ ಸಂಕೀರ್ಣವಾಗಿ ಕಂಡರಿಸಿವೆ. ಹೀಗೆ ರಾಜಕೀಯ ಕಾದಂಬರಿ

ಒಂದು ಸಾಹಿತ್ಯ ಪ್ರಕಾರವಾಗಿ ಒಂದು ನಿರ್ದಿಷ್ಟವಾದ ಘಟ್ಟವನ್ನು ತಲುಪಿರುವಾಗ ಅದಕ್ಕಿಂತ ಬಹಳ ಹಿಂದಿನ ಹಂತದಲ್ಲಿ ಬರೆಯುತ್ತಿದ್ದಂತೆ ನಿರಂಜನರ ಕೃತಿಗಳು ಮೂಡಿ ಬಂದಿರುವುದು ನಮ್ಮ ಅತೃಪ್ತಿಗೆ ಕಾರಣ. ಏನೇ ಇರಲಿ 'ಮೃತ್ಯುಂಜಯ' ಕಾದಂಬರಿಯಲ್ಲಿ ಅನ್ಯಶಾಸ್ತ್ರಗಳನ್ನು ಬಳಸಿಕೊಂಡಿರುವ ಬಗೆ ಸರಳವಾದುದು ಮತ್ತು ಬಾಹ್ಯ ವಿವರಗಳನ್ನು ದಾಖಲೆ ಮಾಡುವಷ್ಟಕ್ಕೆ ಮಾತ್ರ ಸೀಮಿತವಾದುದು.

'ಮೃತ್ಯುಂಜಯ' ಜಗತ್ತಿನ ಮೊದಲ ರೈತ ಬಂಡಾಯವನ್ನು ಒಳಗೊಂಡಿದೆ. ತನ್ನ ಪ್ರತಿಪಾತ್ರದಲ್ಲಿ ಚರಿತ್ರೆಯ ಭಾರದೊಂದಿಗೆ ಕುತೂಹಲದಿಂದ ಸಾವಧಾನದಿಂದ ಓದಿಸಿಕೊಂಡು ಸಾಗುವ ಕೃತಿ.

ನಿರಂಜನರ ಚಾರಿತ್ರಿಕ ಕಾದಂಬರಿಗಳಲ್ಲಿ ಪುನರಾವರ್ತವಾಗುವ ಕೆಲವು ಸಂಗತಿಗಳು, ಆಶಯಗಳು (motifs) ಅವರ ಬರವಣಿಗೆಯ ಸ್ವರೂಪವನ್ನು ಸಮಕಾಲೀನ ಸಂದರ್ಭದಲ್ಲಿ ಅರ್ಥಮಾಡಿಕೊಳ್ಳಲು ಸಹಾಯವಾಗುವುದು.

(೧) ಈ ಕಾದಂಬರಿಗಳಲ್ಲಿ ಮುಖ್ಯ ಪಾತ್ರಗಳಿಗೆ ಉಂಟಾಗುವ ಸಾವು ಅಥವಾ ಮರಣದಂಡನೆಯನ್ನು ಗಮನಿಸಬೇಕು. ಈ ಪಾತ್ರಗಳು ಸಾವಿನ ನೆಲೆಯಲ್ಲಿ ನಿಂತು ಬದುಕಿನ ಪುನರಾವಲೋಕನ ಮಾಡುವಾಗಲೂ ಬದುಕಿನ ಸಾತತ್ಯವನ್ನು ಮರೆಯುವುದಿಲ್ಲ. ಬದುಕಿನ ಬಗ್ಗೆ ಇರುವ ಪ್ರೀತಿಯು ಅನನ್ಯತೆಯನ್ನು ತಿಳಿಸುತ್ತವೆ.

(೨) ವಿದ್ಯಾಭ್ಯಾಸದಿಂದ ಇನ್ನೂ ಭ್ರಮನಿರಸವಾಗದ ಮಧ್ಯಮ ವರ್ಗದ ಸಂವೇದನೆಗಳು ಅಕ್ಷರ ಜ್ಞಾನಕ್ಕೆ ಕೊಡುತ್ತಿದ್ದ ಮಹತ್ವವು ನಿರಂಜನರ ಕೃತಿಗಳಲ್ಲಿ ಪದೇ ಪದೇ ಮೂಡಿಬರುತ್ತದೆ (ಪ್ರಗತಿಶೀಲರೆಲ್ಲರ ಕೃತಿಗಳಲ್ಲಿ ಇದನ್ನು ಕಾಣಬಹುದು). ಉದಾಹರಣೆಗೆ 'ಮೃತ್ಯುಂಜಯ'ದ ಮಹದೇವ ತನ್ನ ಮಗನಿಗೆ ಆರಿಸಿಕೊಡುವ ಆಟದ ಸಾಮಾನೆಂದರೆ ಪಪ್ಪೈರಸ್ ಹಾಳೆಯ ಮೇಲೆ ಬರೆದ ಜಾಣ್ನುಡಿಯ ಸುರುಳಿಗಳು. ಸಾಕ್ಷರತೆಯ ಆಂದೋಲನ ನಡೆಯುತ್ತಿರುವ ಪ್ರಸ್ತುತ ಸಂದರ್ಭದಲ್ಲಿ ಅಕ್ಷರಜ್ಞಾನ ನೀಡುವ ದೃಷ್ಟಿ ಮುಖ್ಯವಾಗುತ್ತದೆ.

(೩) ಪ್ರಸ್ತುತ ಅಂತರ್‌ರಾಷ್ಟ್ರೀಯ ವಿದ್ಯಮಾನಗಳ ಏಳುಬೀಳಿನ ಸಂದರ್ಭದಲ್ಲಿ ಮಾರ್ಕ್ಸ್‌ವಾದವನ್ನು ನಂಬಿದ ದೇಶಗಳು ಛಿದ್ರಗೊಳ್ಳುತ್ತಿವೆ. ಆಂತರಿಕ ಕಲಹದಿಂದ ಕಚ್ಚಾಡುತ್ತಿವೆ. ನಿರಂಜನರು ಸಮತಾವಾದವ ಹಿನ್ನೆಲೆಯಲ್ಲಿ ರಚಿಸಿರುವ ಈ ಕಾದಂಬರಿಗಳು ಎಷ್ಟರಮಟ್ಟಿಗೆ ಪ್ರಸ್ತುತ ಎಂಬ ಪ್ರಶ್ನೆಯೂ ಏಳುತ್ತದೆ. ಆದರೆ ಮನುಷ್ಯನಲ್ಲಿ ಸಮಾನತೆಯನ್ನು, ಮಾನವೀಯತೆಯನ್ನು ನಿರಂತರವಾಗಿ ಸಾರುವ ಕೃತಿಗಳಾಗಿ 'ಚಿರಸ್ಮರಣೆ' ಮತ್ತು 'ಮೃತ್ಯುಂಜಯ' ನಮ್ಮ ಮಧ್ಯೆ ಸದಾ ಇರುತ್ತವೆ,

ನಿರಂಜನರ ಕಾದಂಬರಿಗಳ ಹಿನ್ನೆಲೆಯಲ್ಲಿ ಸಮಕಾಲೀನ ಆಶಯಗಳನ್ನು ಹೀಗೆ ಅರ್ಥ ಮಾಡಿಕೊಳ್ಳಬಹುದೆಂದು ನನ್ನ ತಿಳುವಳಿಕೆ.

(೪) ಅ.ನ.ಕೃ., ತ.ರಾ.ಸು., ಬಸವರಾಜ ಕಟ್ಟೀಮನಿ, ನಿರಂಜನ ಪ್ರಗತಿಶೀಲ ಮನೋಧರ್ಮದ ಹಿನ್ನೆಲೆಯಿಂದ ಮೂಡಿಬಂದಿದ್ದರೂ ಪ್ರತಿಯೊಬ್ಬರದೂ ಒಂದೊಂದು ರೀತಿಯ ವಿಶಿಷ್ಟತೆ. ಅ.ನ.ಕೃ., ತ.ರಾ.ಸು. ಮಠಾಧಿಪತಿಗಳ ವೈಭವವನ್ನು ತಮ್ಮ ಕೃತಿಗಳಲ್ಲಿ ಪ್ರಕಟಿಸಿದ್ದಾರೆ. ಧರ್ಮ ದುರಂತಗಳ ಬಗ್ಗೆ ಕುರುಡಾಗುತ್ತಾರೆ. ಕಟ್ಟೀಮನಿ ಸ್ವಾತಂತ್ರ್ಯ ಯೋಧರನ್ನು ಮಾತ್ರ ಆಯ್ಕೆ ಮಾಡಿಕೊಂಡರು. ನಿರಂಜನರು ತಮ್ಮ ನಾಲ್ಕು ಚಾರಿತ್ರಿಕ ಕಾದಂಬರಿಗಳಲ್ಲಿ ಧರ್ಮಪೀಠಗಳನ್ನು ಸ್ಥಾಪಿಸದೆ, ವ್ಯಕ್ತಿ ಪೂಜೆಗೆ ಅವಕಾಶ ನೀಡದೆ ಬಂಡಾಯ ಮನೋಧರ್ಮ ಮತ್ತು ಮಾನವೀಯತೆಗೆ ಬೆಲೆ ಕೊಟ್ಟಿದ್ದಾರೆ. ಆದರೆ ಪ್ರಗತಿಶೀಲ ಬರಹಗಾರರಲ್ಲಿ ನಿರಂಜನರದು ಒಂಟಿಧ್ವನಿ. ಸಮಕಾಲೀನ ಬರಹಗಾರನಿಗೆ ಇಂತಹ ದ್ವಂದ್ವಗಳು ಎದುರಾದಾಗ ಇರಬೇಕಾದ ಎಚ್ಚರವನ್ನು ಈ ಕಾದಂಬರಿಗಳು ಸೂಚಿಸುತ್ತವೆ.

(೫) ನಿರಂಜನರು ತಮ್ಮ ಕೃತಿಗಳಲ್ಲಿ ವರ್ಗ ಸಂಘರ್ಷವನ್ನು ಮಾತ್ರ ವೈಭವೀಕರಿಸಿದರು. ಆದರೆ ವರ್ಣ ಸಂಘರ್ಷವನ್ನು ಗಂಭೀರವಾಗಿ ಪರಿಗಣಿಸಲಿಲ್ಲ. ಮಧ್ಯಮ ವರ್ಗದ, ಬ್ರಾಹ್ಮಣ ಮನೋಭಾವದ ಪರೋಕ್ಷ ನಿಯಂತ್ರಣ ಇಲ್ಲಿ ಕಂಡು ಬರುತ್ತದೆ. ಇಂದಿನ ಇಂಡಿಯಾದ ಸಂದರ್ಭದಲ್ಲಿ

ವರ್ಗ ಸಂಘರ್ಷ ಮತ್ತು ವರ್ಣ ಸಂಘರ್ಷ ಒಟ್ಟಿಗೆ ಇರುವುದನ್ನು ಗಮನಿಸಿದರೆ ನಿರಂಜನ ಕೃತಿಗಳಲ್ಲಿನ ಕೊರತೆ ಕಂಡು ಬರುತ್ತದೆ. ಈ ಅಪೂರ್ಣತೆಯನ್ನು ತುಂಬಿಕೊಳ್ಳುವ ಬಗೆ ಸಮಕಾಲೀನ ಆಶಯಗಳಲ್ಲಿ ಮೂಡಿಬಂದರೆ ಒಳ್ಳೆಯದು. ನಿರಂಜನರ ವರ್ಗ ಹೋರಾಟದ ಸಂದರ್ಭದಲ್ಲಿ ಏಕಮುಖ ದೃಷ್ಟಿಯನ್ನು ಕಾಣಬಹುದು. ಕಮ್ಯೂನಿಸ್ಟ್ ಪಕ್ಷಕ್ಕೆ ವಿದಾಯ ಹೇಳಿದ್ದರೂ ತತ್ತ್ವಕ್ಕೆ ಬದ್ಧರಾಗಿದ್ದರು ನಿರಂಜನರು. ಪಕ್ಷದ ಒಡಕಿನ ಬಗ್ಗೆ ಕೊನೆಯ ವರೆಗೂ ಮೌನವಾಗಿಯೇ ಉಳಿದರು. ಪಕ್ಷದ ಒಳಗಿನ ಏರಿಳಿತಗಳ ಸಂಘರ್ಷವನ್ನು ತಮ್ಮ ಕೃತಿಗಳಲ್ಲಿ ಕಂಡರಿಸಲಿಲ್ಲ. ಈ ರೀತಿಯ ಸ್ವವಿಮರ್ಶೆ ಕೊರತೆ ನಿರಂಜನರ ಕೃತಿಗಳಲ್ಲಿ ಕಂಡು ಬರುತ್ತದೆ. ಬರಹಗಾರನಿಗೆ ಸ್ವವಿಮರ್ಶೆ ಮುಖ್ಯ ಎಂಬುದು ಸಮಕಾಲೀನ ಸಂದರ್ಭದಲ್ಲಿ ಅವಶ್ಯಕ, ಅನಿವಾರ್ಯ.

(೬) ಸಮಕಾಲೀನ ಆಶಯಗಳಲ್ಲಿ ಸಂವಹನ ಸ್ವರೂಪವೂ ಮುಖ್ಯವಾಗುತ್ತದೆ. ನಿರಂಜನರ ಕೃತಿಗಳಲ್ಲಿ ಭಾಷೆಯ ಬಳಕೆಯನ್ನು ಗಮನಿಸಿದರೆ ಭಾಷೆಯಲ್ಲಿ ಸರಳತೆ. ಭಾವುಕತೆಯಿಂದ ಕೂಡಿದ ವೈಚಾರಿಕತೆ, ಚಿಕ್ಕ ಚಿಕ್ಕ ವಾಕ್ಯಗಳ ಆಕರ್ಷಕ, ನಿರಾಲಂಕರ ರಚನೆ ಕಂಡು ಬರುತ್ತದೆ. ('ಅಂಕಣ' ಬರಹಗಾರ) ಅವರದು ಪ್ರಾಮಾಣಿಕ (Standard) ಭಾಷೆ. ಆದರೆ ಇಂದಿನ ಸಮಕಾಲೀನ ಆಶಯಗಳಲ್ಲಿ 'ಉಪಭಾಷೆ', 'ಉಪಸಂಸ್ಕೃತಿ'ಗಳ ಬಳಕೆ ಗಮನ ಸೆಳೆಯುತ್ತಿದೆ. ನಿರಂಜನರ ಈ ದೃಷ್ಟಿ ಗಂಭೀರ ಚಿಂತನೆಗೆ ಅವಕಾಶ ಮಾಡಿಕೊಟ್ಟಿದೆ.

(೭) ದಲಿತ-ಬಂಡಾಯದ ಪ್ರಭಾವದಿಂದ ಸಮಕಾಲೀನ ಹಿರಿಯ ಲೇಖಕರು ಕೊಂಚಮಟ್ಟಿಗೆ ಪ್ರಭಾವ ಹೊಂದಿದಂತೆ ನಿರಂಜನರೂ ನವ್ಯತೆಯ ಗಾಳಿಯಿಂದ ಪ್ರಭಾವಗೊಂಡಿದ್ದಾರೆ ಎಂಬುದಕ್ಕೆ ಅವರ 'ಮೃತ್ಯುಂಜಯ'ವೇ ಸಾಕ್ಷಿ. ಅದರ ರಚನಾವಿಧಾನ ಅವರ ಇತರ ಕೃತಿಗಳಿಗಿಂತ ಭಿನ್ನವಾಗಿದೆ. ಇದೇ ಸಂದರ್ಭದಲ್ಲಿ ಚದುರಂಗರ 'ವೈಶಾಖ', ವ್ಯಾಸರಾಯ ಬಲ್ಲಾಳರ 'ಬಂಡಾಯ', ತ. ರಾ. ಸು. ಅವರ 'ದುರ್ಗಾಸ್ತಮಾನ' ಕೃತಿಗಳನ್ನು ಜ್ಞಾಪಿಸಿಕೊಳ್ಳಬಹುದು.

ಇದೇ ರೀತಿ ದಲಿತ ಬಂಡಾಯದ ಗಾಳಿಯಿಂದ. 'ಸ್ವರೂಪ' ಬರೆ ತೇಜಸ್ವಿ ಅವರ ಕರ್ವಾಲೊ, 'ಮೂರು ದಾರಿಗಳು' ಬರೆದ ಚಿತ್ತಾಲ ಶಿಕಾರಿ 'ಬಿರುಕು'. ಬರೆದ ಲಂಕೇಶರು ಮುಸ್ಸಂಜೆಯ ಕಥಾಪ್ರಸಂಗವನ್ನು ಬರೆದರು.

ಹೀಗೆ ಸಮಕಾಲೀನ ಆಶಯಗಳು, ನಿಲುವುಗಳು ಪರಸ್ಪರ ಪ್ರಭಾವ ದಿಂದ ಹೊಸ ಆವಿಷ್ಕಾರಗಳಿಗೆ ಎಡೆಮಾಡಿ ಕೊಡುತ್ತಲೇ ಇರುತ್ತದೆ. ಇದು ಜೀವಂತಿಕೆಯ ಲಕ್ಷಣವೂ ಹೌದು.

# ನಿರಂಜನರ ಕತೆಗಳಲ್ಲಿ ವಸ್ತು ಮತ್ತು ತಂತ್ರ

—ಆರ್. ಜಿ. ಹಳ್ಳಿ ನಾಗರಾಜ್

ಮಾರ್ಕ್ ಶೋರರ್ ಎಂಬ ವಿಮರ್ಶಕ "Technique as Discovery" ಎಂಬ ಲೇಖನದಲ್ಲಿ ಕತೆ/ಕಾದಂಬರಿಗಳ 'ವಸ್ತು ಮತ್ತು ತಂತ್ರ' ಎರಡೂ ಒಂದೇ ಎಂದು ಅಭಿಪ್ರಾಯಿಸುತ್ತಾನೆ. ಅವನ ಪ್ರಕಾರ—

(೧) ತಂತ್ರವೆಂದರೆ ಲೇಖಕನ ಸಾಮಗ್ರಿಯಾದ ಅನುಭವ, ತನ್ನ ಬಗ್ಗೆ ಸರಿಯಾಗಿ ಗಮನ ಕೊಡಲು ಅವನನ್ನು ಒತ್ತಾಯಿಸುವ ಸಾಧನ;

(೨) ತಂತ್ರವೆಂದರೆ ಲೇಖಕನಿಗೆ ತನ್ನ ವಸ್ತುವನ್ನು ಅನಾವರಣಗೊಳಿಸಲು, ಶೋಧಿಸಲು, ವಿಕಾಸಗೊಳಿಸಲು, ಅದರ ಅರ್ಥವನ್ನು ಸೂಚಿಸಲು ಹಾಗೂ ವಸ್ತುವನ್ನು ಬೆಲೆ ಕಟ್ಟಲು ಇರುವ ಏಕಮಾತ್ರ ಸಾಧನ.

ಇದರಿಂದ ವಸ್ತು ಮತ್ತು ಧೋರಣೆಗಳಿಂದ ತಂತ್ರವನ್ನು ಬೇರ್ಪಡಿಸಲು ಆಗುವುದಿಲ್ಲ ಎಂದು ಹೇಳಬಹುದಾದರೂ, ಇದೇ ಕಾರಣಕ್ಕಾಗಿ. ಒಂದು ಕೃತಿಯ ವಸ್ತುವಿನ ವಿಶ್ಲೇಷಣೆ ಅದರ ತಂತ್ರದ ವಿಶ್ಲೇಷಣೆಯೂ ಆಗಬೇಕಾಗುತ್ತದೆ ಎಂದೂ ಅಭಿಪ್ರಾಯಿಸಬಹುದಾಗಿದೆ.

ವಸ್ತು ಮತ್ತು ತಂತ್ರಕ್ಕೆ ಕೊಂಡಿಯಾದ ಸಾಹಿತ್ಯದ 'ವಸ್ತುವೇ' ಜೀವನ ಹಾಗೂ ಅನುಭವ. ಇಲ್ಲಿ ಜೀವನವೆಂದರೆ ಏನು ಎಂಬ ಪ್ರಶ್ನೆಯೊಂದಿಗೆ

ಹತ್ತೆಂಟು ಉತ್ತರಗಳ ಬೆನ್ನು ಕಾಣತೊಡಗುತ್ತದೆ. ಪಾಶವೀ ಪ್ರವೃತ್ತಿಯಿಂದ ಒಡಿದು, ಆಧ್ಯಾತ್ಮ ವಿಚಾರವನ್ನು ಒಳಗೊಂಡು, ಮಾನವೀಯ ಅನುಕಂಪದ ಬದುಕಿನವರೆಗೆ ಜೀವನದ ಅರ್ಥವನ್ನು ಹಿಗ್ಗಿಸಬಹುದು. ಕೆಲವು ಸಂದರ್ಭಗಳಲ್ಲಿ ಬರೀ ಜೀವನವೇ ಸಾಹಿತ್ಯದ ವಸ್ತು ಎಂದೂ ಹೇಳಲಾಗದು. ಆದರೆ ಈ ಅನುಭವವು ಜೀವನವನ್ನು ನಿಕಟವಾಗಿ, ಮೂರ್ತವಾಗಿ ಅರಿಯಲು ಸಹಾಯ ಮಾಡುತ್ತದೆ. ಇಲ್ಲಿ ಜೀವನಾನುಭವ ಏಕ ಮುಖವಾಗಿದ್ದೂ ಸಾರ್ವತ್ರಿಕ ಬದುಕಿಗೆ ಸ್ಪಂದಿಸಿದ ರೀತಿ ಒಟ್ಟು ಗೂಡಿದಾಗ ಅದಕ್ಕೊಂದು ಅರ್ಥ ಬರುತ್ತದೆ. ಇಂಥಲ್ಲಿ ಬದುಕಿನ ಅನುಭವ ಕತೆಯ ವಸ್ತುವಾದಾಗ ನಿರೂಪಣಾ ವಿಧಾನದಲ್ಲಿ, ಅದನ್ನು ಸಂಘಟಿಸುವ ವಿಧಾನದಲ್ಲಿ ಹಾಗೂ ಅದನ್ನು ಕುತೂಹಲ ಕೆರಳಿಸುವಂತೆ ಹೇಳುವಲ್ಲಿ ಪಾತ್ರಗಳ ಪರಸ್ಪರ ಸಂಬಂಧ –ಬೆಳವಣಿಗೆ–ಉದ್ದೇಶಗಳನ್ನು ಆಕರ್ಷಕವಾಗಿ ನಿರೂಪಿಸುವ ಬುದ್ಧಿವಂತಿಕೆಯ ನ್ನೊಳಗೊಂಡ ಸನ್ನಿವೇಶವನ್ನು ಕಥಾ ಸಂವಿಧಾನದ ತಂತ್ರವೆಂದೂ ಕರೆಯ ಲಾಗುತ್ತದೆ. ಆಗ ಕೃತಿಯ ಯಶಸ್ಸು ಕಥೆಯ ತಾಂತ್ರಿಕ ಸಾಮರ್ಥ್ಯ ದಿಂದಲೂ ಗಟ್ಟಿಯಾಗಬಹುದು. ಏಕೆಂದರೆ ಸಮರ್ಥವಾದ ತಂತ್ರವೊಂದು ಸೂಕ್ಷ್ಮವಾದ ವಸ್ತುವನ್ನು ಆಸ್ವಾದಿಸುತ್ತದೆ. ಇದೇ ಸಂದರ್ಭದಲ್ಲಿ ಕೃತಿ ಯೊಂದರ ತಂತ್ರ ಕೃತಕವೆಂದು ತೋರಿದಾಗ, ಅದು ಬಾಲಿಶ ಅನಿಸಿದಾಗ ಅದರ ಅಪ್ರಸ್ತುತತೆಯನ್ನು ಹೇಳುವುದರೊಂದಿಗೆ ಕೃತಿಯ ವಸ್ತು ಹಾಗೂ ಧೋರಣೆಗಳ ಕುರಿತು ಚರ್ಚಿಸಬಹುದು.

ನಿರ್ಣಯ ಏನೇ ಇದ್ದರೂ ಒಂದು ವಿಶಿಷ್ಟ ಧೋರಣೆಯ ಸಲುವಾಗಿ ಒಂದು ವಿಶಿಷ್ಟ ತಂತ್ರ ಹುಟ್ಟಿಕೊಂಡಿರುವುದರಿಂದ ವಸ್ತುವಿನಿಂದ ತಂತ್ರ ವನ್ನಷ್ಟೇ ಬೇರ್ಪಡಿಸಿ ಕಥಾ ಸಂವಿಧಾನದ ಬಗ್ಗೆ ಯೋಚಿಸಲಾಗುವುದಿಲ್ಲ.

ವಸ್ತು ಮತ್ತು ತಂತ್ರದ ವಿಶ್ಲೇಷಣೆಯ ಹಿನ್ನೆಲೆಯಲ್ಲಿ ಸಾಹಿತ್ಯ ಕೃತಿ ಯೊಂದು ನಮಗೆ ನೀಡುವುದು ಮಹತ್ವಪೂರ್ಣವಾದ ಹಾಗೂ ಅರ್ಥಪೂರ್ಣ ವಾದ ಅನುಭವ ಎಂಬುದನ್ನು ಅಲ್ಲಗಳೆಯಲಾಗದು.

ಮೇಲಿನ ಪೀಠಿಕೆಯ ಮಾತುಗಳು ಕಥಾ ಸಾಹಿತ್ಯದ ವಸ್ತು–ತಂತ್ರದ ಬಗೆಗಿನ ಅರ್ಥವ್ಯಾಪ್ತಿಯ ಸೀಳು ನೋಟವನ್ನು ಹೇಳುವುದಾದರೂ, ಕನ್ನಡ

ಸಾಹಿತ್ಯದಲ್ಲಿ ಗಮನಾರ್ಹ ಸಾಹಿತ್ಯ ಕೃಷಿ ಮಾಡಿದ ನಿರಂಜನರ ಸಣ್ಣ ಕತೆಗಳ ಕೋಟೆ ಪ್ರವೇಶಿಸಲು ಇದು ಸಹಕಾರಿ ಆಗುತ್ತದೆಂದು ಭಾವಿಸಬಹುದು.

ಕತೆಗಾರ, ಕಾದಂಬರಿಕಾರ, ಪತ್ರಕರ್ತ, ಅಂಕಣಕಾರ, ಸಂಪಾದಕ–ಇವೆಲ್ಲವೂ ಒಬ್ಬ ವ್ಯಕ್ತಿಯಲ್ಲಿ ಮೇಳೈಸಿದಾಗ ಸಾಹಿತ್ಯ ಪ್ರಕಾರವೊಂದರ 'ನೆಲೆ' ಕಂಡುಕೊಳ್ಳುವುದು ಹೇಗೆಂಬ 'ಜಿಜ್ಞಾಸೆ' ನನಗೆ ಕಾಡಿದೆ. ನಿರಂಜನರ 'ನೆಲೆ', 'ಇದೇ' ಎಂದು ಒಂದು ಪ್ರಕಾರದ ಕಡೆಗೆ ಬೆರಳುಮಾಡಿ ತೋರಿಸಿದಾಗಲೂ ಆ ಒಂದು ಪ್ರಕಾರ ಬಿಟ್ಟು ಇತರೆ ಪ್ರಕಾರಗಳಿಗೆ ಅನ್ಯಾಯ ಮಾಡಿದಂತಾಗುತ್ತದೆ. ವಸ್ತು, ಭಾಷೆ ಹಾಗೂ ಶೈಲಿಯಿಂದಾಗಿ ತನ್ನ ಛಾಪನ್ನು ಒತ್ತಿಕೊಳ್ಳುವ ಬರಹಗಾರ ತನ್ನ ನಂಬಿಕೆಯ ವಿಚಾರಗಳನ್ನೂ ಸ್ಪಷ್ಟವಾಗಿ ಗುರ್ತಿಸಿಕೊಳ್ಳಬಹುದು.ವಿಚಾರ ಅಭಿವ್ಯಕ್ತಿ ವಿಧಾನಗಳು ಏಕ ಕಾಲಕ್ಕೆ ಕಾರ್ಯ ನಿರ್ವಹಿಸುವುದರಿಂದ ಬರಹಗಾರನ ಮೇಲೆ ಅವುಗಳ ಹಿಡಿತ ಇದ್ದೇ ಇರುತ್ತದೆ. ಬರಹಗಾರನ ವಿಚಾರಗಳು ಆತ ಬದುಕನ್ನು ಸ್ವೀಕರಿಸಿದ ರೀತಿಯಲ್ಲಿ ಕಾರ್ಯ ಪ್ರವೃತ್ತವಾಗುವುದರಿಂದ ಇಲ್ಲಿ 'ಸೈದ್ಧಾಂತಿಕತೆ' ಪ್ರಮುಖ ಪಾತ್ರವಹಿಸುತ್ತದೆ. ಈ ಸೈದ್ಧಾಂತಿಕತೆಯೇ ಬದ್ಧ ಸಾಹಿತ್ಯ ನಿರ್ಮಿತಿಗೂ ದಾರಿ ಮಾಡಿಕೊಡುವುದರಿಂದ ಸಾಹಿತ್ಯ–ಸಮಾಜ–ಸಂಸ್ಕೃತಿ ಇವುಗಳ ಸಂಕೀರ್ಣ ಸಂಬಂಧವನ್ನು ಅರಿಯಲು ಸಮಾಜ ಶಾಸ್ತ್ರೀಯ ದೃಷ್ಟಿ ಬೆಳೆಸಿಕೊಳ್ಳಬೇಕಾಗುತ್ತದೆ.

ಇಂಥ ಸಮಾಜ ಶಾಸ್ತ್ರೀಯ ದೃಷ್ಟಿಯನ್ನಿಟ್ಟುಕೊಂಡ ಬರಹಗಳನ್ನು ನಿರಂಜನರ ಕೃತಿ ಸಮೂಹದಲ್ಲಿ ಕಾಣಬಹುದು.

ಪ್ರಗತಿಶೀಲ ಸಾಹಿತ್ಯದ ಬಹುಮುಖ್ಯ ಕೊಂಡಿಯಾಗಿದ್ದ ನಿರಂಜನರ ಬದುಕು-ಬರಹ ಹೋರಾಟದಿಂದ ಕೂಡಿತ್ತು. ಬಾಲ್ಯವನ್ನು ವಿಚಿತ್ರ ಸಾಮಾಜಿಕ ಸಂದರ್ಭದ ಒತ್ತಡದಲ್ಲಿ ಕಳೆದ 'ಕುಳಕುಂದ ಶಿವರಾಯ', 'ಕಿಶೋರ'ನಾಗಿ, ಮುಂದೆ 'ನಿರಂಜನ' ಆದದ್ದು ಕುತೂಹಲಕರವಾದದ್ದು. ಹದಿಮೂರನೇ ವಯಸ್ಸಿನಲ್ಲೇ ಕಥಾಲೋಕ ಪ್ರವೇಶಿಸಿದ ನಿರಂಜನರು, ೧೭ನೇ ವಯಸ್ಸಿಗೆ ಪತ್ರಕರ್ತರಾಗಿ. ೨೪ನೇ ವಯಸ್ಸಿಗೆ ಯೌವನಿಗರಾಗಿದ್ದಾಗ ಎಡಪಂಥೀಯ ವಿಚಾರಕ್ಕೆ ಮನಸೋತು ಬರಹಗಳಲ್ಲಿ ಸಾಮಾಜಿಕ ಆರ್ಥಿಕ-ಅಸಮಾನತೆ, ಕ್ರೌರ್ಯ, ದಬ್ಬಾಳಿಕೆಗಳನ್ನು ಸೂಕ್ಷ್ಮವಾಗಿ ವಿಶ್ಲೇಷಿಸ

ತೊಡಗಿ ಮೂರು ಹಂತಗಳಲ್ಲಿ ತಮ್ಮ ಕಥಾ ಸಾಹಿತ್ಯದ ಬೆಳವಣಿಗೆಗಳನ್ನು ಗುರ್ತಿಸಿಕೊಂಡಿದ್ದಾರೆ.

ಹುಡುಗನಾಗಿದ್ದಾಗಿನ ತನ್ನ ಪರಿಸರದ ಘಟನೆಗಳಿಗೆ ಸಹಜವಾಗಿ ಸ್ಪಂದಿಸಿ; ತಂದೆಯಿಲ್ಲದ ತಬ್ಬಲಿ ಹುಡುಗನ ಅಸಹಾಯಕತೆ, ಬಡವಿಧವೆ ತಾಯಿಯ ಕಷ್ಟ ಕಾರ್ಪಣ್ಯಗಳನ್ನು. ಅವಳ ತಳಮಳಗಳನ್ನು ಹಲವಾರು ಕತೆಗಳಿಗೆ ಗ್ರಾಸ ಮಾಡಿಕೊಂಡಿದ್ದಾರೆ. ಇದಕ್ಕೆ ಉದಾಹರಣೆ, ಒಂದು ಹಿಡಿ ಹುಲ್ಲು, ಬಹಿಷ್ಕೃತೆ, ಮೂರು ದುಡ್ಡು ಇತ್ಯಾದಿ. ಈ ಕತೆಗಳಲ್ಲೆಲ್ಲಾ ನಿರಂಜನರ ವೈಯಕ್ತಿಕ ಬದುಕಿನ ಆಗು ಹೋಗುಗಳೇ ಸಂಚಾರಿ ಭಾವವಾಗಿ ಕೆಲಸ ಮಾಡಿವೆ ಎನ್ನಿಸುವುದುಂಟು. ಒಂದು ರೀತಿಯ ಆತ್ಮ ಚರಿತ್ರೆಯನ್ನೇ ಇಲ್ಲಿ ಹುಡುಕಬಹುದಾಗಿದೆ.

ಬಾಲ್ಯದ ಕತೆಗಳು ಎಲ್ಲೋ ಹರಿದು-ಹಂಚಿ ಹೋಗಿವೆಯೆಂದು "ಧ್ವನಿ" ಮೊದಲ ಸಂಪುಟದ ಸ್ವಗತದಲ್ಲಿ ನಿರಂಜನರೇ ಹೇಳಿಕೊಂಡಿದ್ದಾರೆ. ಸುಮಾರು ಇನ್ನೂರರ ಹತ್ತಿರ ಅವರು ಕತೆಗಳನ್ನು ಬರೆದಿದ್ದರೂ "ಧ್ವನಿ" ಸಂಪುಟ ೧ ಹಾಗೂ ೨ ರಲ್ಲಿ ನೂರೈವತ್ತಕ್ಕೂ ಮಿಕ್ಕಿ ಕತೆಗಳಿವೆ. ಇದರಲ್ಲಿ ಸೇರ್ಪಡೆ ಆಗಿರುವ ಕತೆಗಳ ಹುಟ್ಟು, ಸಂದರ್ಭಗಳನ್ನು ಆರಂಭದಲ್ಲೇ ತಮ್ಮ ಜ್ಞಾಪಕದಿಂದ ೧೯೮೭ ರಲ್ಲೇ (ಪಾರ್ಶ್ವವಾಯುವಿಗೆ ತುತ್ತಾದದ್ದು ೧೯೭೧ : ದೇಹದ ಒಂದು ಪಾರ್ಶ್ವ ಅಸ್ತಿತ್ವ ಕಳೆದುಕೊಂಡಿತ್ತೇ ವಿನಃ ನೆನಪಿಗೆ ಧಕ್ಕೆ ಆಗಿರಲಿಲ್ಲ) ಬರೆದಿದ್ದಾರೆ. ಕತೆಯ ಆರಂಭದಲ್ಲೇ ಕತೆಯೊಂದರ ಹುಟ್ಟು, ಸಂದರ್ಭ, ಬೆಳವಣಿಗೆಗಳ ಬಗ್ಗೆ ಹೇಳಿದಾಗ ಇಂಥ ವಿವರವೊಂದು ಕತೆಯ ಓದುಗ/ವಿಮರ್ಶಕನಿಗೆ ಅಗತ್ಯವೆ ? ಎಂಬ ಪ್ರಶ್ನೆಯ ಜೊತೆಯಲ್ಲೇ ಓದುಗನಿಗೆ ಬೇರೆ ಬೇರೆ ನೆಲೆಯಲ್ಲಿ ಆಲೋಚಿಸಲು ಸಹಾಯಕವಾಗಬಲ್ಲದೆ ? ಎಂದೂ ಚಿಂತಿಸಬೇಕಿದೆ.

ಮುಖ್ಯವಾಗಿ ಸ್ವಾತಂತ್ರ್ಯ ಚಳುವಳಿಯ ಹೋರಾಟ ಹಾಗೂ ನವೋದಯ ಸಾಹಿತ್ಯದ ಉಚ್ಛ್ರಾಯ ಸ್ಥಿತಿಯಲ್ಲೇ ಆದರ್ಶದ, ಕನಸಿನ ಫಲ ಪಡೆಯಲು ಹೊರಟ ನಿರಂಜನ ಗುರ್ತಿಸಿಕೊಂಡದ್ದು ಪ್ರಗತಿಶೀಲರಾಗಿ.

ತಾತ್ವಿಕ ಪ್ರಣಾಳಿಕೆಯನ್ನು ಪ್ರಗತಿಶೀಲ ಬರಹಗಾರರು ಕತೆ ಕಾದಂಬರಿಗಳಲ್ಲಿ ತರುವುದರ ಮೂಲಕ ಮಧ್ಯಮ ವರ್ಗದ ಜೀವನಾನುಭವಕ್ಕೆ ಆಪ್ತವಾದವರು. ಇದಕ್ಕೂ ಸಾಮಾಜಿಕ ಚಾರಿತ್ರಿಕ ಒತ್ತಡವಿದೆ. ಒಟ್ಟಿನಲ್ಲಿ ಪ್ರಗತಿಶೀಲ ಬರಹದ ತಾತ್ವಿಕ ನಂಬಿಕೆಗಳು ಕೃತಿಯಲ್ಲಿ ಮೂರ್ತರೂಪ ಪಡೆದಿವೆ ಎಂಬುದೂ ಸತ್ಯ. ಈ ತಾತ್ವಿಕತೆಯಲ್ಲಿ ಕ್ರಾಂತಿಯ ಹಂಬಲವಿಟ್ಟುಕೊಂಡು ಆರಂಭದಲ್ಲಿ ಬರೆದ ಕತೆಗಳಲ್ಲಿ 'ರಕ್ತ ಸರೋವರ', 'ಬೆಳಕು ಹರಿಯಿತು', 'ಎಣ್ಣೆ, ಚಿಮಣಿ ಎಣ್ಣೆ' ಮುಂತಾದುವು.

೧೯೪೭ ರಲ್ಲಿ ಬರೆದ 'ರಕ್ತ ಸರೋವರ' ಕತೆಗೆ ಎಡಪಂಥೀಯ, ಕ್ರಾಂತಿಕಾರಕ ಬದಲಾವಣೆಯ ಹುಮ್ಮಸ್ಸಿನ ಮನಸ್ಸು ನಿಚ್ಚಳವಾಗಿ ಕೆಲಸ ಮಾಡಿರುವುದನ್ನು ಗುರ್ತಿಸಬಹುದು. 'ರಕ್ತ ಸರೋವರ'ದ ಶೀರ್ಷಿಕೆಯೇ ದುರಂತ ಸೂಚನೆಯ ಹಾಗೂ ಹೋರಾಟ ಕುರಿತ ವಸ್ತುವನ್ನು ಹೇಳುವಂತಿದೆ. ಸರೋವರದ ಪ್ರಶಾಂತತೆಗೆ ರಕ್ತದೋಕುಳಿ ಚೆಲ್ಲಿ ದುರಂತವನ್ನು ಹೇಳುವಲ್ಲಿನ ಈ ಶೀರ್ಷಿಕೆ ಇವೊತ್ತು ಕಾಶ್ಮೀರದಲ್ಲಿ ತಲ್ಲಣಗೊಂಡ 'ದಲ್ ಸರೋವರ'ದ ವಸ್ತು ಸ್ಥಿತಿಯ ದುರಂತವನ್ನೇ ಹೇಳುತ್ತದೆ. ಹಿಂಸೆಯ ರೂಪು ತಾಳಿದ್ದ ಸಂದರ್ಭ 'ದಲ್'ನ ದಡದಲ್ಲಿ ಬಿದ್ದಿದ್ದ ಹೆಣಗಳ ರಾಶಿಯಿಂದ ಬೆಚ್ಚಿ ಬೀಳುವಂತೆ ಮಾಡಿ ಸರೋವರವೇ ರಕ್ತದೋಕುಳಿಯಾದ ಚಿತ್ರಣವನ್ನು ಕೊಡುವಲ್ಲಿ ಕವಿತೆಯೊಂದರ ಗಂಭೀರತೆಯನ್ನು, ರುದ್ರರಮಣೀಯ ಭೀಕರತೆಯನ್ನೂ ನೆನಪಿಸುತ್ತದೆ.

ಕಾವ್ಯಕ್ಕಿರುವ ಲಯ, ಪದಪ್ರಯೋಗ, ವಾಕ್ಯ ಸಂಕ್ಷಿಪ್ತತೆ ಈ ಕತೆಯಲ್ಲಿ ಆರಂಭದಿಂದ ಅಂತ್ಯದವರೆಗೂ ಗೋಚರಿಸುತ್ತದೆ. ತುಂಡರಿಸಿದ ಪದಪ್ರಯೋಗದಿಂದಾಗಿ ವಸ್ತುವಿಗೆ, ವಿನ್ಯಾಸಕ್ಕೆ ಎಲ್ಲೂ ಧಕ್ಕೆ ಬಾರದೆ ಕತೆ ಫ್ಲ್ಯಾಷ್ ಬ್ಯಾಕ್‌ನಲ್ಲಿ ನಡೆದು ತಂತ್ರಗಾರಿಕೆಯ ಮಹತ್ವವನ್ನು ಉಳಿಸಿಕೊಳ್ಳುವಲ್ಲಿ ಯಶಸ್ವಿಯಾಗಿದೆ. "ಇನ್ನಿಲ್ಲದ 'ಲೇಕ್'ನಿಗೆ ಗಾಳಿ ಮೆಲ್ಲ ಮೆಲ್ಲನೆ ತಟಾಕದ (ದೋಣಿಯ) ಮೇಲಿಂದ ಬೀಸುತ್ತಿತ್ತು. 'ವಿಹಾರ ಸರೋವರ' ರಕ್ತ ಸರೋವರವಾಗಿ ರುದ್ರಭೀಕರವಾಗಿತ್ತು"—ಎಂದು ಅಂತ್ಯವಾಗುವಾಗ ಮನಸ್ಸನ್ನು ಗಲಿಬಿಲಿಯಾಗಿಸುತ್ತದೆ.

ಕ್ರಾಂತಿಯ ಹುನ್ನಾರಿಗೆ ಹಲವಾರು ಉದಾಹರಣೆಯಾಗುವ ಕತೆಗಳು ನಿರಂಜನರ ೧೭–೩೨ರ ವಯಸ್ಸಿನ ಅಂತರದಲ್ಲಿ ಹುಟ್ಟಿದವುಗಳಾಗಿರುವುದ ರಿಂದ, ಬಹುಶಃ ಅವರು ತೊಡಗಿಸಿಕೊಂಡಿದ್ದ ಎಡಪಂಥೀಯ ಧೋರಣೆಯ ಪ್ರಭಾವವೂ ಇದಕ್ಕೆ ಕಾರಣ ಇದ್ದಿರಬಹುದಾಗಿದೆ. ಗುಣಾತ್ಮಕ ಬೆಳವಣಿಗೆ ಯನ್ನು ಒಳಗೊಂಡ ಪ್ರಬುದ್ಧ ಕತೆಗಳಲ್ಲಿ 'ಕೊನೆಯ ಗಿರಾಕಿ', 'ಧ್ವನಿ', 'ಒಂಟಿ ನಕ್ಷತ್ರ ನಕ್ಕಿತು'. 'ನಾಸ್ತಿಕ ಕೊಟ್ಟ ದೇವರು' ಮುಖ್ಯವಾಗುತ್ತವೆ. ಈ ಕತೆಗಳಲ್ಲಿ ನಿರಂಜನರು ಮಾಡಿರುವ ಪ್ರಯೋಗ ಕೂಡ ವಿಶಿಷ್ಟವಾದದ್ದು. ವಸ್ತು ನಮ್ಮೆದುರೇ ಸುಳಿವಂತಾದ್ದಾದರೂ ಅದನ್ನು ಕಂಡ ರೀತಿ ಮತ್ತು ತಂತ್ರದ ಕುಶಲತೆ ಗಮನಾರ್ಹವಾಗಿದೆ.

"ಕ ಕಾ ಕ ಅ ಅ ಅ" ಎಂಬ ಸಾಂಕೇತಿಕತೆಯ ಅಕ್ಷರಗಳ ದನಿಯಲ್ಲಿ ಮೂಕ ವೇದನೆ ಅನುಭವಿಸುವ 'ಕಾಣಿ'ಯ ದುರಂತ ಕತೆ–"ಕೊನೆಯ ಗಿರಾಕಿ". ವ್ಯವಸ್ಥೆಯ ಕ್ರೂರ ದಬ್ಬಾಳಿಕೆ ಚಿತ್ರಿಸುವಲ್ಲಿ ಸಂಕಟ ತೋರುವ ಈ ಕತೆ ನಿರುತ್ತರ ಶೋಷಣೆಯ ಸಂಕೇತವಾಗಿದೆ. ಕೈ ಮೊಂಡಾದವನೊಬ್ಬನ 'ಸಂಗಾತಿ'ಯಾಗಿದ್ದ ಕಾಣಿ, ಅವನ ಮಾಯವಾಗುವಿಕೆ ನಂತರ, ಸಮಾಜದ ದುರ್ಬಲ ಮನಸ್ಸಿಗರ ದೌರ್ಜನ್ಯಕ್ಕೆ, ದಬ್ಬಾಳಿಕೆಗೆ ಸಿಕ್ಕು ಅನುಭವಿಸುವ ಲೈಂಗಿಕ ಕ್ರಿಯೆಗಳ ಬದುಕಲ್ಲಿ ದೇಹವನ್ನು ಹಿಂಡಿ ಹಿಪ್ಪೆ ಮಾಡಿಕೊಂಡು ನಿತ್ರಾಣವಾಗುವ ಸ್ಥಿತಿಯನ್ನು ಅಂಗೈ ಹುಣ್ಣಿನ ಕನ್ನಡಿಯಾಗಿ ಇಡೀ ಸಮಾಜಕ್ಕೆ ಸವಾಲಾಗಿಸುತ್ತದೆ–ಈ ಕತೆ.

ಕಂಡವರ ಪಾಲಾದ ಕಾಣಿಯು ದೇಹವನ್ನು ಮಾರಿಕೊಳ್ಳುವ ಸ್ಥಿತಿ ಬಂದಾಗ ಗಿರಾಕಿಗಳ ಹುಡುಕಾಟದಲ್ಲಿ ತೊಡಗುತ್ತಾಳೆ. ತನ್ನ ಮನೆ, ಬಂಧು, ಬಳಗ, ಮೊಂಡು ಕೈನವನ ನೆನಪಲ್ಲಿ ಕಾಸಿನ ಬೆಲೆ ಅರಿಯದ ಕಾಣಿಗೆ ಜಗತ್ತು ಕ್ರೂರವಾಗುತ್ತ, 'ಒಂಟಿ'ಯಾಗುವ ಅನುಭವವಾಗುತ್ತಿದ್ದಂತೆ ಚರ್ಮ ರೋಗಕ್ಕೆ ತುತ್ತಾಗುತ್ತಾಳೆ. ರಾತ್ರಿಯಾಗುತ್ತಿದ್ದಂತೆ ಅಲಂಕಾರ ಮಾಡಿ ಕೊಂಡು ಗಿರಾಕಿಗಳಿಗೆ ಕಾದು ಬಂದ ಅನಾಮಿಕನ ಜೊತೆ ಸಾಗಿ, ನಿತ್ರಾಣೆತ ಳಾಗಿ ಕೊನೆಗೆ ಆ ಗಿರಾಕಿಯಿಂದ ದುರಂತದ ಬದುಕು ಅಪ್ಪುವ ಸ್ಥಿತಿ; ನಂತರ

ಅವಳ ಹೆಣದ ಮೇಲೆ ಹಾರಾಡುವ ಗಿಡುಗ*ದ ಸಾಂಕೇತಿಕತೆ ವ್ಯವಸ್ಥೆಯ ಕ್ರೂರ ಹಿಡಿತಕ್ಕೆ ತಾನಿನ್ನೂ ಕೊನೆಯ ಗಿರಾಕಿಯಾಗಿದ್ದೇನೆಂದು ಧ್ವನಿಸುವ ಅರ್ಥ ಮನುಕುಲಕ್ಕೆ ಸವಾಲಾಗಿ ನಿಲ್ಲುತ್ತದೆ. ಕಾಣೆಯ ಸ್ಥಿತಿಯನ್ನು ನಿರಂಜನರು 'ಒಂದು' ನಗರದಲ್ಲಿ ಕಂಡು ಚಿತ್ರಿಸಿರಬಹುದಾದರೂ ಇಂಥ 'ಕಾಣೆ'ಯರು ಎಲ್ಲ ನಗರಗಳಲ್ಲೂ ಕಾಣಬರುವವರೇ ಆಗಿದ್ದಾರೆ, 'ಕಾಣೆ'ಯೊಬ್ಬಳ ಸಾವು 'ಕೊನೆಯ ಗಿರಾಕಿ'ಯಲ್ಲಾಗಿದ್ದರೂ ದಿನವು ಇದೇ ಸಾವು ದಾವಣಗೆರೆಯಲ್ಲೋ, ಮಂಗಳೂರಿನಲ್ಲೋ, ಮೈಸೂರಿನಲ್ಲೋ ಸಂಭವಿಸುತ್ತ, ಯಾವುದೇ ನಗರದಲ್ಲೂ ಕಾಣ ಬರುವ ಕಾಣೆಯರನ್ನು ಜೀವಂತ ಪಾತ್ರವಾಗಿಸಿ ಕಾಡಿಸುತ್ತದೆ.

ಈ ಕತೆಯ ವಸ್ತು ನಿರಂತರ ಶೋಷಣೆಯನ್ನೊಳಗೊಂಡ ಸಮಾಜವೊಂದರ ಊನವನ್ನು ಹೇಳುತ್ತದಾದರೂ, ಕತೆ ಹೇಳುವ ಶೈಲಿ ಹಾಗೂ ತಂತ್ರದಲ್ಲೂ ಯಶಸ್ವಿಯಾದದ್ದಾಗಿದೆ. ಕನ್ನಡದ ಬಹುಮುಖ್ಯ ಆ್ಯಂಥಾಲಜಿಗಳಲ್ಲಿ ಈ ಕತೆ ಸೇರಲು ಬಹುಶಃ ರೋಗಗ್ರಸ್ತ ಸಮಾಜದ ಚಿತ್ರಣ ಜೀವಂತವಾಗಿರುವುದೇ ಒಂದು ಮುಖ್ಯ ಕಾರಣವಾಗಿದ್ದಿರಬಹುದು. ವಸ್ತು ಮತ್ತು ತಂತ್ರಗಳ ಸಂಬಂಧದ ದೃಷ್ಟಿಯಿಂದಲೂ ಸರಳ ಸಾರ್ಥಕ ಕತೆಯಾಗಿರುವುದೂ ಕಾರಣವಾಗಿರಬಹುದು. ಹಲವಾರು ಆ್ಯಂಥಾಲಜಿಗಳಿಗೆ ಸೇರಿಸಿದ ಸಂಪಾದಕ (ವಿಮರ್ಶಕ)ರು ಏನೇ ಹೇಳಿಕೊಂಡರೂ, ನಿರಂಜನರ ಇತರ ಕತೆಗಳಿಗಿಂತ ಹೆಚ್ಚು. ವಸ್ತು ನಿಷ್ಠವಾದ ಹಾಗೂ ಸರಳ ಭಾಷಾ ಪ್ರಯೋಗದಿಂದ ಸುಗಮ ಓದು ಪಡೆವ ಈ ಕತೆಯ ಮೂಲ ಸೆಲೆ ಮಾನವೀಯ ದೃಷ್ಟಿಯಾಗಿದೆ.

ನಿರಂಜನರ ಇಡೀ ಸಾಹಿತ್ಯಾಭಿವ್ಯಕ್ತಿಗೆ ಒಂದು ರೂಪಕದಂತಿರುವ

---

* ಕತೆಗಾರ ನಿರಂಜನರು ಗಿಡುಗವನ್ನು ಸಾಂಕೇತಿಕರಿಸಿದ್ದು ಸ್ಪಷ್ಟವಿಲ್ಲ. ನಮ್ಮ ಪರಿಸರದಲ್ಲಿ 'ಹದ್ದು' ಸತ್ತ ದೇಹದ ಮಾಂಸಕ್ಕೆ ಹಾತೊರೆವ ಪಕ್ಷಿ. ಗಿಡುಗ ಮನುಷ್ಯ, ಪ್ರಾಣಿಗಳ ದೇಹಕ್ಕಿಂತ, ಪಕ್ಷಿಗಳನ್ನು ಹೊಂಚು ಹಾಕಿ ಹಾರಿಸಿಕೊಂಡು ಹೋಗುತ್ತದೆ.

— ಲೇಖಕ

'ಧ್ವನಿ'–ಕ್ರೂರ ದಬ್ಬಾಳಿಕೆಯೆದುರು, ಸಮಾನತೆ ಪರವಾಗಿ ಮೂಕನೂ ಮಾತ ಡುತ್ತಾನೆ ಎಂಬುದು. ಸ್ವಾತಂತ್ರ್ಯ ಭಾರತ ಸ್ಥಿತಿಯನ್ನು ಸಾಂಕೇತಿಸುವ ಈ ಕತೆ ಮೌನದುಡಿಯ ಅರ್ಥವನ್ನು ಅರ್ಥೈಸುತ್ತದೆ.

'ಕಣ್ಣಾರೆ ಕಂಡವರು' ಎಂಬ ಕತೆ ಪ್ರಸ್ತುತವಾಗಿರುವ ರಾಜಕೀಯ ಗೂಂಡಾ ಸಂಸ್ಕೃತಿ ಮತ್ತು ನಿರ್ಲಜ್ಜತನವನ್ನು ಸಾರಿ ಹೇಳುತ್ತದೆ. ರೋಗ ಗ್ರಸ್ತ ಸಾಮಾಜಿಕ ವ್ಯವಸ್ಥೆಗೆ ಈ ಕತೆ ಒಳ್ಳೆ ಉದಾಹರಣೆ. ಹೆಪ್ಪುಗಟ್ಟಿದ ಕ್ರೌರ್ಯವನ್ನು ಇದು ದಾಖಲಿಸುತ್ತದೆ, ಗೂಂಡಾಗಿರಿ ಮತ್ತು ಶ್ರಮಜೀವಿಗಳ ನಡುವಿನ ಸಾತ್ವಿಕತೆಯ ನಡುವೆ ಕತೆಯ ವಸ್ತು ಸೆಣಸುತ್ತದೆ. ಪೋಲೀಸ್ ವ್ಯವಸ್ಥೆ ಜನಸಾಮಾನ್ಯನಿಗೆ ರಕ್ಷಣೆ ಕೊಡುವ ಬದಲು ಭಯ ಹುಟ್ಟಿಸುವ ವಸ್ತುಸ್ಥಿತಿಯ ಹಿನ್ನೆಲೆಯಲ್ಲಿ ಈ ಕತೆ ನ್ಯಾಯದ ತಕ್ಕಡಿಗೆ ಏರಿಳಿತಗಳನ್ನು ಕೊಡುವಲ್ಲಿನ ತೂಗಾಟದ 'ವ್ಯಂಗ್ಯ'ವನ್ನು ಧ್ವನಿಸುತ್ತದೆ. ಕತೆಯ ವಸ್ತುವಿಗೆ ತಕ್ಕದಾದ ಭಾಷೆಯ ಬಿಗುವು ಇಲ್ಲಿದೆ. ತಂತ್ರಗಾರಿಕೆಯಷ್ಟೇ ಮೆರೆಯದೆ 'ವಾಸ್ತವ' ಎದುರಾಗುತ್ತದೆ.

'ಒಂಟಿ ನಕ್ಷತ್ರ ನಕ್ಕಿತು' ಎರಡು ತಲೆಮಾರುಗಳ ನಡುವಿನ ಅಭಿಪ್ರಾಯ ಭಿನ್ನತೆಯನ್ನು, ಅಣೆಕಟ್ಟಿನ ವ್ಯಾಜ್ಯದಲ್ಲಿ ನಿರೂಪಿಸುವ ಕತೆಯಾಗಿದೆ. ಜಡತನ-ಪ್ರಗತಿ, ಭೀತಿ-ಸಾಹಸ. ಮೂಢ ನಂಬಿಕೆ-ವೈಜ್ಞಾನಿಕತೆಗಳನ್ನು ಪ್ರತಿನಿಧಿಸುವ ಎರಡು ತಲೆಮಾರುಗಳೂ ಇಲ್ಲಿವೆ. ಬದುಕಿನ ಮುನ್ನಡೆಗೆ ಇಲ್ಲಿನ ಕಥಾ ವಸ್ತು ಸಂಘರ್ಷಕ್ಕಿಳಿದು ಸಮರ್ಥ ಕತೆಯಾಗಿ ನಿಲ್ಲುತ್ತದೆ.

ಕೆಲವು ಕತೆಗಳನ್ನಷ್ಟೇ ಪ್ರಾತಿನಿಧಿಕವಾಗಿ ತೆಗೆದುಕೊಂಡು ಇಲ್ಲಿ ಚರ್ಚಿಸಿರುವೆನಾದರೂ. ನಿರಂಜನರ ನೂರಾರು ಕತೆಗಳಲ್ಲಿ ಹತ್ತಾದರೂ "ಗಟ್ಟಿಕಾಳು"ಗಳಾಗಿರುವುದು ಕನ್ನಡ ಸಾಹಿತ್ಯ ಸಂದರ್ಭಕ್ಕೆ ಮಹತ್ವದ ಕಾಣಿಕೆಯಾಗಿದೆ. ಕಾದಂಬರಿಕಾರರಾಗಿಯೂ ಯಶಸ್ವಿಯಾಗಿರುವ ನಿರಂಜನರು. ಕಥಾ ಸಾಹಿತ್ಯದಲ್ಲಿ ಕಾದಂಬರಿ ಪ್ರಕಾರಗಳ ವಸ್ತು-ವಿನ್ಯಾಸ ಪಡೆದಿದ್ದಾರೆ. ಇದಕ್ಕೆ ಅವರು ನಿಕಟ ಪತ್ರಿಕಾ ಸಂಪರ್ಕ ಹೊಂದಿದ್ದರ ಜೊತೆಗೆ ಅಂಕಣಕಾರರಾಗಿದ್ದುದೂ ಕಾರಣ ಇದ್ದಿರಬಹುದು. ಕನಸುಗಾರ ನಿರಂಜನರು ತಾವು

ಕಂಡದ್ದನ್ನು ವೈಭವೀಕರಿಸದೆ, ವಸ್ತು ಸ್ಥಿತಿಗೆ ಚ್ಯುತಿ ಬಾರದಂತೆ ಬರೆದಿದ್ದರೂ, ಒಮ್ಮೊಮ್ಮೆ ಅವರ ಕತೆಗಳ ಬಂಧ ಸಡಿಲ ಅನ್ನಿಸುತ್ತದೆ. ಸರಳ ವಿವರಗಳ ಕಣ್ಣು ಪಟ್ಟಿ ಹಲವು ಕತೆಗಳಲ್ಲಿದೆ. ಉದಾಹರಣೆಗೆ, 'ಹಮಾಲ ಇಮಾಂಸಾಬಿ' ವರದಿಯಂತಿದೆ. ಇಲ್ಲಿ ವಸ್ತು ಮತ್ತು ತಂತ್ರ ಒಂದೇ ಆಗಿರುತ್ತದೆಯೆಂದಾದರೂ ಕೆಲವೊಮ್ಮೆ ಇವೆರಡರ ನಡುವೆ ಪೈಪೋಟಿ ಬೆಳೆಯುತ್ತದೆ.

ವಿವರಗಳನ್ನು ಕಡಿತಗೊಳಿಸಿ ಮಾತು-ಸಂಭಾಷಣೆಗಳ ಮೂಲಕ ವಸ್ತು-ವಿಷಯಕ್ಕೆ ವ್ಯಾಪ್ತಿ ಬರುವಂತೆ ಬಹಳಷ್ಟು ಕತೆಗಳಲ್ಲಿ ಎಚ್ಚರ ವಹಿಸಿರುವ ನಿರಂಜನರು ಸಂಭಾಷಣೆಗಳಲ್ಲೇ ಕತೆ ನೇಯ್ವ ಕಲೆಗಾರಿಕೆಯನ್ನು ತಂತ್ರಗಾರಿಕೆಯನ್ನೂ ಕರಗತಮಾಡಿಕೊಂಡದ್ದು ಅವರ ಬರವಣಿಗೆಯ ವೈಶಿಷ್ಟ್ಯ. ವಸ್ತುವೊಂದನ್ನು ಪೂರ್ವಯೋಜಿತ ಚೌಕಟ್ಟಿಗೆ ಒಳಪಡಿಸಿ ಅದರ ಸುತ್ತಾ ವಾಸ್ತವ ವಿಚಾರಗಳನ್ನು ಗ್ರಹಿಸುತ್ತಾ, ಕತೆಗೆ ಬೇಕಾದ ಓಟಕ್ಕೆ ಕಾಲ್ಪನಿಕ ವಿಚಾರಗಳನ್ನು ಸೇರಿಸುತ್ತಾ, ಮನಸ್ಸು ತಾಕುವ ಕೆಲಸ, ಸಾಕಷ್ಟು ಕತೆಗಳಲ್ಲಿದೆ. ಇವೆಲ್ಲವುಗಳ ಹಿಂದೆ ಕೆಲಸ ಮಾಡಿದ್ದು ಸಹಜ ಪ್ರೀತಿ ಹಾಗೂ ಮಾನವೀಯ ಕಳಕಳಿ.

**ಸಮಾರೋಪಕ್ಕಿಷ್ಟು ಮಾತು :**

ಸ್ವಾತಂತ್ರ್ಯ ಪೂರ್ವದ ಆದರ್ಶ, ನವೋದಯದ ಸೌಂದರ್ಯ ಪ್ರಜ್ಞೆ, ಪ್ರಗತಿಶೀಲತೆಯ ಕ್ರಾಂತಿಯ ಕನಸು, ನವ್ಯ-ದಲಿತ-ಬಂಡಾಯಗಳ ಸಂದರ್ಭದ ಸಾಮಾಜಿಕ ಬದಲಾವಣೆಯ ತುಡಿತಗಳು ನಿರಂಜನ ಅವರಲ್ಲಿ ನಿರಂತರ ಕೆಲಸ ಮಾಡಿವೆ. ಇದಕ್ಕೆ ಅವರ ಹಲವು ಕತೆಗಳೇ ಪುರಾವೆ.

ಪ್ರಸ್ತುತ ಸಾಹಿತ್ಯ ಸಂದರ್ಭದಲ್ಲಿ ನಿರಂಜನರ ಕತೆಗಳ ಮರುವಿಮರ್ಶೆ ಆಗಬೇಕಿರುವುದರಿಂದ ವಿಮರ್ಶಾಮಾನದಂಡ ಏನಾಗಬೇಕು ? ಸಾಹಿತಿಯೊಬ್ಬ ಬೆಳೆದ ಪರಿಸರ, ಹಿನ್ನೆಲೆ, ಬದುಕು-ಹೋರಾಟ, ಬದ್ಧತೆಗಳು ಇಲ್ಲಿ ಗಣನೆಗೆ ಬರಬಹುದೆ ? ಹಾಗೆ ಲೆಕ್ಕಿಸುತ್ತಾ ಹೋದರೆ ವಿಮರ್ಶಾಕ್ಷೇತ್ರ ಯಾವ ದಿಕ್ಕಲ್ಲಿ ಸಾಗಬಹುದು ? ಈ ಇತ್ಯಾದಿ ಆಲೋಚನೆಗೆ ಉತ್ತರ

ಕಂಡುಕೊಳ್ಳುವುದಾದರೆ ನಿರಂಜನರ ಕತೆಗಳ ಬಗ್ಗೆ ಮರು ಆಲೋಚನೆ ಬೇಕೆನಿಸುತ್ತದೆ.

* * *

**ನೆನಪು ಗ್ರಂಥಗಳು :**


೧. **ನಿರಂಜನ ಅಭಿನಂದನೆ** (ನಿರಂಜನ ಕಥಾ ಸಾಹಿತ್ಯ : ಲೇ : ಸುಬ್ರಾಯ ಚೊಕ್ಕಾಡಿ) ಪ್ರ : ಕರ್ನಾಟಕ ಸಂಘ, ಪುತ್ತೂರು-೫೭೪ ೨೦೧.(ದ.ಕ)

೨. **ಕಾದಂಬರಿ : ವಸ್ತು ಮತ್ತು ತಂತ್ರ :** ಲೇ : ಗಿರಡ್ಡಿ ಗೋವಿಂದ ರಾಜ, ಸ್ನೇಹ ಪ್ರಕಾಶನ, ವಿಜಯನಗರ, ಬೆಂಗಳೂರು-೫೬೦ ೦೪೦.

೩. **ಕಥೆ ಮತ್ತು ಕಥಾ ಸಾಹಿತ್ಯ :** ಲೇ : ಎಸ್. ಎಲ್, ಭೈರಪ್ಪ, ಸಾಹಿತ್ಯ ಭಂಡಾರ, ಬೆಂಗಳೂರು-೫೬೦ ೦೫೩.

೪. **ಕ್ರಿಯೆ-ಪ್ರತಿಕ್ರಿಯೆ :** ಲೇ : ಡಾ। ಕೆ. ಕೇಶವ ಶರ್ಮ, ಅನ್ವೇಷಣೆ ಪ್ರಕಾಶನ, ವಿಜಯನಗರ, ಬೆಂಗಳೂರು-೫೬೦ ೦೪೦.

೫. **ಸಮಾಜವಾದಿ ವಾಸ್ತವ :** ಲೇ : ಆರ್. ವಿ. ಭಂಡಾರಿ, ಶ್ರೀ ರಾಘವೇಂದ್ರ ಪ್ರಕಾಶನ, ಅಂಕೋಲಾ (ಉ.ಕ)

೬, **ಧ್ವನಿ-೧ :** (ಪ್ರವೇಶ-ಬಿದರಹಳ್ಳಿ ನರಸಿಂಹಮೂರ್ತಿ), ಐ.ಬಿ.ಎಚ್. ಪ್ರಕಾಶನ, ಗಾಂಧಿನಗರ, ಬೆಂಗಳೂರು-೫೬೦ ೦೦೯.

## ಲೇಖಕರ ವಿಳಾಸಗಳು

೧. ಶ್ರೀ ಗುಡಿಹಳ್ಳಿ ನಾಗರಾಜ
ಪ್ರಜಾವಾಣಿ ಮತ್ತು ಡೆಕ್ಕನ್ ಹೆರಾಲ್ಡ್ ವರದಿಗಾರರು
ಚರ್ಚ್ ಬಡಾವಣೆ
ಚಿತ್ರದುರ್ಗ–೫೭೭೫೦೧.

೨. ಶ್ರೀ ಸಿದ್ದನಗೌಡ ಪಾಟೀಲ
ಯುವಲೋಕ
ಶ್ರೀನಗರ
ಧಾರವಾಡ-೫೮೦ ೦೦೩.

೩. ಶ್ರೀ ಹೊರೆಯಾಲ ದೊರೆಸ್ವಾಮಿ
೧೩೪೫, ೪ನೇ ಕ್ರಾಸ್
ಕೆ. ಎಂ. ಪುರಂ.
ಮೈಸೂರು-೫೭೦ ೦೦೪.

೪. ಶ್ರೀ ಚಿ. ಶ್ರೀನಿವಾಸರಾಜು
ನಂ. ೩೭, (ಮಹಡಿ)
೧೪ನೇ ಕ್ರಾಸ್, ೧೧ನೇ ಮುಖ್ಯರಸ್ತೆ
ಲಕ್ಕಸಂದ್ರ ಬಡಾವಣೆ. ವಿಲ್ಸನ್ ಗಾರ್ಡನ್
ಬೆಂಗಳೂರು-೫೬೦ ೦೩೦.

೫. ಶ್ರೀ ಆರ್. ಜಿ. ಹಳ್ಳಿ ನಾಗರಾಜ
೪೭೮, ಕಾದಂಬರಿ, ೧೧ನೇ ಎಂ. ಸಿ. ಬಡಾವಣೆ ರಸ್ತೆ,
ವಿಜಯನಗರ
ಬೆಂಗಳೂರು-೫೬೦ ೦೪೦.

ದಿ॥ ನಿರಂಜನರ ಸೃಜನಶೀಲ ಶಕ್ತಿಯಂತೆಯೇ ಇಚ್ಛಾ ಶಕ್ತಿಯೂ ಅಸಾಧಾರಣ. ಪ್ರಗತಿಶೀಲತೆಯನ್ನು ಒಂದು ಪ್ರಕ್ರಿಯೆಯೆಂದು ಪರಿಭಾವಿಸಿದ ನಿರಂಜನರು ಅನೇಕರೊಳಗೆ ಇನ್ನೂ ನಡೆದಾಡುತ್ತಲೇ ಇದ್ದಾರೆ. ಈ ನಡೆದಾಟವೇ ಒಡನಾಟವಾಗಿ ಒಳಗಿನ ಹೋರಾಟವಾಗಿ ರೂಪುಗೊಳ್ಳುವ ರೀತಿ ನಿರಂಜನರಿಗೆ ಒಂದು ಪ್ರತಿಮೆಯಾಗಬಲ್ಲದು. ಪ್ರ ಗ ತಿ ಶೀ ಲ ಚಳುವಳಿಯ ಕೊರತೆಗಳನ್ನು ಪಟ್ಟಿ ಮಾಡುತ್ತ ನಾಗಾಲೋಟದಲ್ಲಿ ಓಡುವ ವಿಮರ್ಶೆ, ಒಂದು ಕ್ಷಣವಾದರೂ ನಿರಂಜನರನ್ನು ನೇರ ನಿಟ್ಟಿಸಿ, ಕುತೂಹಲ ದಿಂದ ಪುಟತಿರುವುತ್ತ ಪ್ರಶ್ನಾರ್ಥಕವಾಗುತ್ತದೆ, ಆಶ್ಚರ್ಯ ಸೂಚಕವಾಗು ತ್ತದೆ. ನಾಗಾಲೋಟದ ಬುಸುಗುಡುವಿಕೆ ನಸುನಗೆಯಾಗುತ್ತಾ ಮೆಲ್ಲನೆ ಮಾತಾಡತೊಡಗುತ್ತದೆ.